


# ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
# ಎಂ. ಫಿಲ್. ಪದವಿಯ ನಿಬಂಧ

**ನಿಬಂಧದ ವಿಷಯ**

# "ತ್ರಿವೇಣಿಯವರ ಮನೋವೈಜ್ಞಾನಿಕ ಕಾದಂಬರಿಗಳು–ಒಂದು ಅಧ್ಯಯನ"

**ಮಾರ್ಗದರ್ಶಕರು**

ಡಾ॥ ಕೆ. ರಮಾನಂದ

**ಸಂಶೋಧನಾ ವಿದ್ಯಾರ್ಥಿ**

ಪದ್ಮಶ್ರೀ

**ವರ್ಷ**

೨೦೧೧ - ೨೦೧೨

ಎಂ. ವಿ. ಸೀ ಸ್ನಾತಕೋತ್ತರ ಅಧ್ಯಯನ ಕೇಂದ್ರ

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ

ಎನ್. ಆರ್. ಕಾಲೋನಿ,

ಬೆಂಗಳೂರು - ೫೬೦ ೦೧೯

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಎಂ. ವಿ. ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ, ಬೆಂಗಳೂರು ಇವರ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೧ - ೨೦೧೨ ನೇ ಸಾಲಿನ ಎಂ. ಫಿಲ್ ಪದವಿಗಾಗಿ **"ತ್ರಿವೇಣಿಯವರ ಮನೋವೈಜ್ಞಾನಿಕ ಕಾದಂಬರಿಗಳು - ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು **ಡಾ॥ ಕೆ. ರಮಾನಂದ** ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು, ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೆಂಗಳೂರು

ಸಂಶೋಧನಾ ವಿದ್ಯಾರ್ಥಿ
ಪದ್ಮಶ್ರೀ

ದಿನಾಂಕ :

ಪದ್ಮಶ್ರೀ
ಸಹಿ/-

# ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಎಂ. ವಿ. ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ, ಬೆಂಗಳೂರು ಇವರ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೧ – ೨೦೧೨ ನೇ ಸಾಲಿನ ಎಂ. ಫಿಲ್ ಪದವಿಗಾಗಿ **"ತ್ರಿವೇಣಿಯವರ ಮನೋವೈಜ್ಞಾನಿಕ ಕಾದಂಬರಿಗಳು – ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು **ಪದ್ಮಶ್ರೀ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದಾರೆ.

ಈ ನಿಬಂಧವು ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು, ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೆಂಗಳೂರು

ದಿನಾಂಕ : 26.6.2012

ಮಾರ್ಗದರ್ಶಕರು

ಡಾ|| ಕೆ. ರಮಾನಂದ

ಸಹಿ/-

**ಡಾ|| ಕೆ. ರಮಾನಂದ**
**ಎಂ.ಎ.,ಎಂ.ಫಿಲ್.,ಪಿಹೆಚ್.ಡಿ.**
**ಸರ್ ಮತ್ತು ಕನ್ನಡ ವಿಭಾಗದ ಮುಖ್ಯಸ್ಥರು**
**ಕಾಲೇಜು, ಹೆಬ್ಬಾಳ, ಬೆಂಗಳೂರು-24**

ತ್ರಿವೇಣಿಯವರ ಮನೋವೈಜ್ಞಾನಿಕ ಕಾದಂಬರಿಗಳು - ಒಂದು ಅಧ್ಯಯನ”

# ಪರಿವಿಡಿ

ಅಧ್ಯಾಯ - ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಅನೇಕ ಶತಮಾನಗಳ ಪರಂಪರೆಯನ್ನು ಹೊಂದಿರುವ ಕನ್ನಡ ಸಾಹಿತ್ಯವು ನೂರಾರುಸಾರಸ್ವತರ ಸತತ ಸಾಧನೆ ಸೇವೆಗಳ ಫಲವಾಗಿ ಇಂದು ಸಂಪದ್ಭರಿತವಾಗಿಕಂಗೊಳಿಸುತ್ತಿದೆ. ಕನ್ನಡ ಸಾಹಿತ್ಯ ಲೋಕದ ಇಂದಿನ ಔನತ್ಯದಲ್ಲಿ ಮಹನೀಯರ ಮಹತ್ಸಾಧನೆಯೊಂದಿಗೆ ಮಹಿಳೆಯರ ಕೊಡಿಗೆಯು ಸೇರಿದೆ ಎಂಬುದರಲ್ಲಿ ಸಂಶಯವಿಲ್ಲ. ಕನ್ನಡ ಸಾಹಿತ್ಯದಲ್ಲಿ ಪದ್ಯ ಪ್ರಕಾರಕ್ಕಿಂತಲೂ ಗದ್ಯ ಪ್ರಕಾರದಲ್ಲೆ ಹೆಚ್ಚು ಒಲವು ತೋರಿರುವುದು ಕಾಣುತ್ತದೆ. "ಪದ್ಯಂ ವದ್ಯಂ ಗದ್ಯಂ ಹೃದ್ಯಂ" ಎಂಬ ಮುದ್ದಣನ ಮಾತಿನಂತೆ ಗದ್ಯ ಸಾಹಿತ್ಯದಲ್ಲೆ ಸಾಹಿತಿಗಳು ಮತ್ತು ಓದುಗರು ಆಸಕ್ತಿ ತಳೆದಿರುವುದನ್ನು ಕಾಣುತ್ತೇವೆ.

೧೯ ನೇ ಶತಮಾನದ ಉತ್ತರಾರ್ಧ ಭಾಗದಲ್ಲಿ ಕಾದಂಬರಿಯು ವಿಶಿಷ್ಠ ಸಾಹಿತ್ಯ ಪ್ರಕಾರವಾಗಿ ಓದುಗರನ್ನು ಆಕರ್ಷಿಸಿರುವುದನ್ನು ಕಾಣಬಹುದು ಕನ್ನಡ ಕಾದಂಬರಿ ಪರಂಪರೆಯನ್ನು ಅವಲೋಕಿಸಿದಾಗ ಕನ್ನಡದ ಮೊದಲ ಕಾದಂಬರಿಯಾದ 'ಇಂದಿರಬಾಯಿ' ಯಲ್ಲಿ "ಇಂಗ್ಲೀಷ್ ಕಲಿತು ಬ್ರಿಟಿಷ್ ಅಧಿಕಾರಿಯಾದ ಭಾಸ್ಕರರಾಯನನ್ನು ಬಾಲ ವಿಧವೆಯಾದ ಇಂದಿರಾ ಬಾಯಿಯು ಸಂಪ್ರದಾಯಗಳ ವಿರುದ್ಧ ಸೆಣೆಸಾಟ ಮಾಡಿ ಮದುವೆಯಾಗುವುದು ಕನ್ನಡ ಮೊದಲ ಕಾದಂಬರಿಯ ವಸ್ತು".[೧] ಈ ಕಾದಂಬರಿಯ ಉಪ ಶೀರ್ಷಿಕೆಯ ಹೆಸರು 'ಸದ್ಧರ್ಮ ವಿಜಯ' ಯಾವುದನ್ನು ಸಾಂಪ್ರದಾಯಿಕ ಸಮಾಜವು 'ಅಧರ್ಮ' ಎಂದು ಕರೆಯುತ್ತದೆಯೊ ಅದನ್ನೇ 'ಸದ್ಧರ್ಮ' ಎಂದು ಕಾದಂಬರಿ ಘೋಷಿಸುತ್ತದೆ. ಇಂತಹ ವಸ್ತುವುಳ್ಳ ಕಾದಂಬರಿಗಳ ಮೂಲಕ ಕನ್ನಡ ಕಾದಂಬರಿ ಪರಂಪರೆ ಶುರುವಾಗುವುದು ಮಾರ್ಮಿಕವಾಗಿದೆ. ಯಾವ ತಲ್ಲಣ ಹಿಡಿಯುವ ಕೆಲಸವನ್ನು ಕನ್ನಡ ಕಾದಂಬರಿ ಪರಂಪರೆ ಸಮರ್ಥವಾಗಿ ಮುಂದುವರಿಸಿಕೊಂಡು ಬಂತು ಅದು ಆ ತಲ್ಲಣಗಳನ್ನು ಹಿಡಿಯುವುದರ ಜೊತೆಯಲ್ಲಿ ಹೊಸ ಸಮಾಜದ ಕನಸುಗಳನ್ನು ಹೊಸ ಆಶೋತ್ತರಗಳ ಸಂರಚನೆಗಳ ಕೇಂದ್ರದಲ್ಲಿ ಇರುವುದು ಮಹಿಳೆಯರ ಬದುಕು ಎಂಬುದು ಗಮನಾರ್ಹ. ಮಲೆಯಗಳಲ್ಲಿ ಮದುಮಗಳು, ಕಾನೂರ ಸುಬ್ಬಮ್ಮ ಹೆಗ್ಗಡತಿ, ಒಡಲಾಳ, ಕುಸುಮ ಬಾಲೆ, ಗಂಗವ್ವ, ಗಂಗಮಾಯಿ, ಮುಸ್ಸಂಜೆಯ ಕಥಾಪ್ರಸಂಗ, ಗಾಂಧಿ ಬಂದ, ಮುಂತಾದ ಕನ್ನಡದ ಮಹತ್ವದ ಕಾದಂಬರಿಹಳಲ್ಲೆಲ್ಲ ಮಹಿಳೆಯೇ ಕೇಂದ್ರ ಪಾತ್ರ ಆಗಿದ್ದಾಳೆ.

**ಕನ್ನಡ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ.**

೧೯೨೦ ರ ಪೂರ್ವದ ಕನ್ನಡ ಸಾಹಿತ್ಯವನ್ನು ವೀಕ್ಷಿಸಿದಾಗ ಕನ್ನಡ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ ಶ್ಲಾಘನೀಯವಾದುದು. ಅಂದಿನ ಕಾಲಕ್ಕೆ ಕಂತಿಯಿಂದ ಮೊದಲ್ಗೊಂಡು ಅಕ್ಕಮಹಾದೇವಿ, ಗಂಗಾಂಬಿಕೆ, ಸಂಚಿಯ ಹೊನ್ನಮ್ಮ, ಹೆಳವನಕಟ್ಟೆ ಗಿರಿಯಮ್ಮ, ಮುಂತಾದ ದಿಟ್ಟ ಮಹಿಳೆಯರು ತಮ್ಮ ಕಾವ್ಯಗಳ ಮೂಲಕ ಸಮಾಜದ ಕೊಳಕನ್ನು ತೊಳೆಯಲು

ಮುಂದಾಗಿದ್ದರು.ಕ್ರಿ.ಶ ೧೯೦೦ ರಿಂದ ಈಚಿನ ವರ್ಷಗಳಲ್ಲಿ ಅಂದರೆ ಹೊಸಗನ್ನಡದಲ್ಲಿ ಗದ್ಯಸಾಹಿತ್ಯವು ಹೆಚ್ಚು ಪ್ರಸಿದ್ಧಿಗೆ ಬಂದಿದೆ. ೨೦ ನೇ ಶತಮಾನದಲ್ಲಿ ಕನ್ನಡ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆಯಲ್ಲಿಯೂ ಸಹ ವೈವಿಧ್ಯವು ಕಾಣಬರುತ್ತದೆ.

ಇಲ್ಲಿಂದ ಮುಂದೆ ಕೇವಲ ಕಾವ್ಯ ಪ್ರಕಾರದಲ್ಲಿ ಒಲವನ್ನು ತೋರುತ್ತಿದ್ದ ಮಹಿಳೆಯು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ತಮ್ಮ ಕೌಶಲ್ಯವನ್ನು ತೋರ್ಪಡಿಸಿದರು. ಅಂದಿನ ಪ್ರಮುಖ ಬರಹಗಾರ್ತಿ 'ಭಾರತಿ'ಯವರೂ ಒಬ್ಬರಾಗಿದ್ದಾರೆ, ಇವರ ಪೂರ್ಣ ಹೆಸರು ತಿರುಮಲೆ ರಾಜಮ್ಮ ತಪಸ್ವಿನಿ ಮಹಾಸತಿ, ವಾತ್ಸಲ್ಯ, ತರಂಗ ಲೀಲಾ ಇವರ ಕಾವ್ಯ ನಾಟಕಗಳಾದರೆ, ಸ್ವರ್ಗನಿರಸನ, ಉನ್ಮತ್ತ ಭಾಮಿನಿ, ಇವು ರೂಪಕಗಳು, ಇವರು ಕೇವಲ ಕನ್ನಡ ಸಾಹಿತ್ಯದಲ್ಲೆ ಅಲ್ಲದೆ ವಿಶ್ವ ಸಾಹಿತ್ಯದಲ್ಲೂ ಪ್ರಸಿದ್ಧಿ ಹೊಂದಿದ್ದಾರೆ. ಇವರ ಗಾಂಧೀಜಿಯವರ ಆತ್ಮಕಥೆಯನ್ನ ಇಂಗ್ಲೀಷನ ಮೂಲಕ ಇತರ ಭಾಷೆಗಳಿಗೂ ಅನುವಾದವಾಗಿವೆ.

ಕಾದಂಬರಿಯು ಇಂದು ಕನ್ನಡ ಸಾಹಿತ್ಯದಲ್ಲಿ ಅತ್ಯಂತ ಜನಪ್ರಿಯಗಳಿಸಿರುವುದು ಸರಿಯಷ್ಟೇ ಇಂದು ಅನೇಕ ಮಹಿಳೆಯರು ಕಾದಂಬರಿಗಳನ್ನು ಪ್ರಕಟಿಸುತ್ತಿರುವುದು ಸಾಧಾರಣವಾದ ವಿಚಾರವಾಗಿದೆ. ಆದರೆ ೧೯೩೦ ಕ್ಕೆ ಮೊದಲೇ ಕೆಲವಾರು ಕಾದಂಬರಿಗಳನ್ನು ಬರೆದು ಪ್ರಕಟಿಸುತ್ತಿದ್ದ 'ನಂಜನಗೂಡಿನ ಶ್ರೀಮತಿ ತಿರುಮಾಲಾಂಬೆ'ಯವರನ್ನು ಕನ್ನಡ ಕಾದಂಬರಿಗಾರ್ತಿಯರಲ್ಲಿ ಅಗ್ರಗಣ್ಯರೆಂದು ಪರಿಗಣಿಸಬಹುದು, ಉತ್ತಮ ಸಮಾಜ ಸೇವಕೆಯಾಗಿದ್ದ ಶ್ರೀಮತಿ ಆರ್.ಕಲ್ಯಾಣಮ್ಮರವರೂ ಕೂಡ ಕಾದಂಬರಿ ಹಾಗೂ ಕತೆಗಳನ್ನು ಬರೆಯುವುದರೊಂದಿಗೆ ಸಾಹಿತ್ಯಕ್ಕೆ ಕೊಡುಗೆ ನೀಡಿದ್ದಾರೆ. ನಂತರ ಬಂದಂತಹ 'ಎಂ.ಕೆ ಇಂದಿರಾರ'ವರು ಬೆಂಗಳೂರಿನ 'ಲೇಖಕಿಯರ ಸಂಘ'ದ ಸೂತ್ರಧಾರಿಯಾಗಿ ಕಾರ್ಯನಿರ್ವಹಿಸಿದ್ದಾರೆ. ಮಡದಿ, ತುಂಗಭದ್ರ, ಶಾಂತಿಧಾಮ, ಚಿದ್ವಿಲಾಸ, ಗೆಜ್ಜೆಪೂಜೆ, ಸುಖಾಂತ ಮುಂತಾದ ೨೫ಕ್ಕೂ ಹೆಚ್ಚು ಕೃತಿಗಳನ್ನು ನೀಡಿದ್ದಾರೆ. ಹೆಚ್.ಆರ್ ಇಂದಿರಾರವರು ಬಾಳಿನ ಪಥ ಸಂಸಾರ ಸಮರ, ಮೋಡ ಚದುರಿತು, ಬಾಳು ಬೆಳಗಿತು, ಮುಂತಾದ ಕೃತಿಗಳನ್ನು ಕನ್ನಡಕ್ಕೆ ನೀಡಿದ್ದಾರೆ.

ಇವರಲ್ಲದೆ ಶ್ರೀಮತಿ ಜಯಲಕ್ಷ್ಮೀ, ಆರ್ಯಾಂಬ ಪಟ್ಟಾಭಿ, ಉಷಾದೇವಿ, ಅನುಪಮನಿರಂಜನ, ಹೆಚ್.ವಿ ಸಾವಿತ್ರಮ್ಮ ಶ್ರೀಮತಿ ಶ್ಯಾಮಲಾದೇವಿ, ಸರೋಜ ನಾರಾಯಣ್‌ರಾವ್, ಸುನೀತಾ ಕೃಷ್ಣಸ್ವಾಮಿ, ನೀಳಾದೇವಿ, ಎಂ.ಸಿ.ಪದ್ಮ, ಪಂಕಜಮ್ಮ, ಶರ್ವಾಣಿ, ಗಾಯಿತ್ರಿ ದೇವಿ, ಪ್ರೇಮಾಭಟ್, ಇಂದಿರಾ ರಾಜಶೇಖರ್, ಶಾರದಾ ಪ್ರೇಮಲತಾ, ಮಮ್ತಾಜ್ ಬೇಗಂ, ಆರ್ ಶಾಂತಕುಮಾರಿ, ಶ್ರೀಮತಿ ಕೆ ಸರೋಜ ರಾವ್ ಇವರು ತಾವು ತಮ್ಮ ಬರವಣಿಗೆಯ ಪ್ರಪಂಚಕ್ಕೆ ಕಾಲಿರಿಸಿದ ಕೆಲವೇ ವರ್ಷಗಳೊಳಗಾಗಿ ಸುಮಾರು ನಲ್ವತ್ತು ಕೃತಿಗಳನ್ನು ರಚಿಸಿ ಪ್ರಕಟಿಸಿದ್ದಾರೆ. "ಇಷ್ಟು ಅಲ್ಪಾವಧಿಯಲ್ಲಿ ಈಕೆಯು ಸಾಧಿಸಿರುವ ಸಾಧನೆಯು ಪ್ರಾಯಶಃ ಕನ್ನಡದ ಮಹಿಳಾ ಸಾಹಿತಿಗಳ ಇತಿಹಾಸದಲ್ಲೇ ಒಂದು ಅಜೇಯವಾದ ದಾಖಲೆಯೆಂದು ಕಾಣುತ್ತೇವೆ, ಮಹಿಳೆಯರೇ ಏನು ಬಹುಶಃ ಕೆಲವಾರು ಲೇಖಕರನ್ನು ಬಿಟ್ಟರೆ ಉಳಿದ ಯಾವ ಸತ್ವಶಾಲಿ ಪುರುಷ ಸಾಹಿತಿಯೂ ಸಹ ಈ ವಿಕ್ರಮವನ್ನು

ಮುರಿಯಲಾರನೆನೋ!"[೨] ಹೀಗೆ ಆಕಾಶದಲ್ಲಿ ಮಿನುಗುವ ಅಸಂಖ್ಯಾತ ತಾರೆಗಳಂತೆ ಕನ್ನಡ ವಾಚಕ ವೃಂದಕ್ಕೆ ಅನೇಕ ಮಹಿಳೆಯರು ಅಮೂಲ್ಯ ಕೊಡುಗೆಗಳನ್ನು ಕೊಟ್ಟಿದ್ದಾರೆ. ಮಹಿಳೆಯರು ಕೇವಲ ಕನ್ನಡ ಭಾಷೆಯಲ್ಲಿ ಅಲ್ಲದೆ ಅನ್ಯ ಭಾಷೆಗಳಿಂದ ಕೃತಿಗಳ ಅನುವಾದಕೂಡ ಮಾಡಿದ್ದಾರೆ ಅಲ್ಲದೆ ಇವರ ಕೃತಿಗಳನ್ನು ಕನ್ನಡ ಭಾಷೆಯಿಂದ ಪರಭಾಷೆಗೆ ಅನುವಾದಗೊಂಡಿರುವ ಸಾಹಿತ್ಯ ಕೃತಿಗಳ ಪಾತ್ರವೂ ಹಿರಿದಾದುದಾಗಿದೆ. ಶ್ರೀಮತಿ ಜಯದೇವಿ ತಾಯಿ ಲಿಗಾಡೆ ಅವರ ಸಾಧನೆಯು ಪ್ರಶಂಸನೀಯ, ಇವರು ಸಿದ್ದಾರಾಮೇಶ್ವರ ಬಸವೇಶ್ವರ ಅಕ್ಕಮಹಾದೇವಿ ಮುಂತಾದವರ ವಚನಗಳನ್ನು ಜನಪ್ರಿಯಗೊಳಿಸಿದ್ದಾರೆ.

"ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ, ತತ್ರ ದೇವತಾ" ಎಂಬ ಸಂಸ್ಕೃತ ಶ್ಲೋಕದಂತೆ ಸ್ತ್ರೀಗೆ ಪೂಜನೀಯ ಸ್ಥಾನವನ್ನು ಕೊಟ್ಟು ಅವಳನ್ನು ದೇವರಂತೆ ನಾಲ್ಕು ಗೋಡೆಗಳ ಮಧ್ಯೆ ಸಮಾಜದ ಕಟ್ಟು ಪಾಡುಗಳ ನಡುವೆ ಪುರುಷ ಸಮಾಜ ಇವಳನ್ನು ಮೂಕಳಾಗಿಸಿತು, ಸಮಾಜದಲ್ಲಿ ಪುರುಷರಂತೆ ಸಮಾನತೆ, ಸ್ವಾತಂತ್ರ್ಯ ಸಮಾನ ಅವಕಾಶಗಳಿಂದ ವಂಚಿತರಾನ್ನಾಗಿ ಮಾಡಿ ಅವಳನ್ನು ಮಿತಿಯಲ್ಲಿಡಲು ತೊಡಗಿತು.

ಕನ್ನಡ ಸಾಹಿತ್ಯದ ಪ್ರತಿಯೊದು ಕ್ಷೇತ್ರದಲ್ಲಿ ಮಹಿಳೆಯರ ಕೈ ಚಳಕವನ್ನು ನೋಡಬಹುದು, ವಿಜ್ಞಾನ, ತಂತ್ರಜ್ಞಾನ, ಆರೋಗ್ಯ, ಶಿಕ್ಷಣ ಎಲ್ಲಾ ಕ್ಷೇತ್ರದಲ್ಲೂ ಇವಳ ಸಾಧನೆಯನ್ನು ಕಾಣಬಹುದಾಗಿದೆ. ಇಷ್ಟೇಲ್ಲಾ ಸಾಧನೆ ಮಾಡಲು ಮಹಿಳೆಯರಿಗೆ ಪ್ರೋತ್ಸಾಹ ದೊರೆಯಿತೆಂದು ಭಾವಿಸುವಂತಿಲ್ಲ ಅನಾದಿಕಾಲದಿಂದ ಹಿಡಿದು ಇಂದಿನವರೆವಿಗೂ ಅನೇಕ ವಿಧದಲ್ಲಿ ಹೆಣ್ಣಿನ ಶೋಷಣೆ ನಡೆಯುತ್ತಾ ಬಂದಿದೆ. ಇವುಗಳನ್ನೆಲ್ಲಾ ಮೀರಿ ಸಾಹಿತ್ಯ ರಚನೆ ಮಾಡಿದವರೇ ಅಸಾಧಾರಣ ಮಹಿಳೆಯರು. ಅವರ ಸಾಲಿನಲ್ಲಿ ನಮ್ಮ ತ್ರಿವೇಣಿಯವರು ಸೇರುತ್ತಾರೆ,

<u>ಅಡಿ ಟಿಪ್ಪಣಿ</u>

೧. 'ಮಲೆಯಗಳಲ್ಲಿ ಮದುಮಗಳು' –ಸಾಂಸ್ಕೃತಿಕ ಮುಖಾಮುಖಿ,
ಸಂ. ರಹಮತ್ ತರೀಕೆರೆ ಹಂಪಿ ವಿಶ್ವವಿದ್ಯಾಲಯ

೨. ತ್ರಿವೇಣಿಯವರ ಕೃತಿಗಳ ಒಳನೋಟ – ಸುಧಾರ್ಥಿ,
ಪ್ರತಿಭಾ ಕಲಾ ಪರಿಷತ್ತು– ಬೆಂಗಳೂರು

## ಅಧ್ಯಾಯ - ೨

### ಜನಪ್ರಿಯ ಕಾದಂಬರಿಗಳಲ್ಲಿ ತ್ರಿವೇಣಿಯವರ ಕಾದಂಬರಿಗಳ ಸ್ಥಾನ

ಸಾಹಿತ್ಯ ಪ್ರಕಾರಗಳಲ್ಲೆ ಕಾದಂಬರಿಯು ಒಂದು ವಿಶಿಷ್ಟ ಸಾಹಿತ್ಯ ಪ್ರಕಾರ ಕಾದಂಬರಿಯ ಅರ್ಥವನ್ನು ನೋಡಿದಾಗ "ಘಟನೆಗಳು ಮತ್ತು ಕ್ರಿಯೆಗಳೊಡನೆ ಅನುಭವಿಸಿ ಮತ್ತು ಮಾಡಿದ ಸಂಗತಿಗಳು ಇವು ಜೀವನದಲ್ಲಿ ಉಂಟಾಗಿ ಕಾದಂಬರಿಯ ಪಾತ್ರಗಳಾಗುತ್ತವೆ. ಇಂಕು ಮತ್ತು ಕಾಗದ ಸಾಕಷ್ಟು ವಿರಾಮ, ತಾಳ್ಮೆಗಳಿದ್ದರೆ, ಯಾರು ಬೇಕಾದರೂ ಕಾದಂಬರಿ ರಚಿಸಬಹುದು".[೧] ಎಂಬ ಮಾತು ಕಾದಂಬರಿಯ ಸರಳ ಸ್ವತಂತ್ರ ಸ್ವಚ್ಛಂದತೆಯನ್ನೆ ಕುರಿತು ಹೇಳುತ್ತವೆ. ಒಂದು ಕಾದಂಬರಿ ಜನಪ್ರಿಯ ಕಾದಂಬರಿಯಾಗಬೇಕಾದರೆ ಆ ಕಾದಂಬರಿಯು ಓದುಗರನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿತವಾಗಿರಬೇಕು ಇಲ್ಲವೆ ಕಾದಂಬರಿಗಾರನ ಸಾಹಿತ್ಯವನ್ನು ಅರ್ಥಮಾಡಿಕೊಳ್ಳುವ ಸಹೃದತಯತೆ ಓದುಗನಿಗಿರಬೇಕು ಆಗಿದ್ದಲ್ಲಿ ಮಾತ್ರ ಆ ಕಾದಂಬರಿ ಜನಪ್ರಿಯ ಕಾದಂಬರಿಯಾಗುತ್ತದೆ. ನಿರಂತರ ನವಿರಂಘ ನಿರೂಪಣೆ ವಸ್ತುವನ್ನು ಸಂಬಂದವಾಗಿ ಪರಿಣಾಮಕಾರಿಯಾಗಿ ನಿರೂಪಿಸುವ ಮನಸ್ಥಿತಿ ಕಾದಂಬರಿಕಾರನಿಗಿದ್ದರೆ ಅದು ಜನಪ್ರಿಯ ಕಾದಂಬರಿಯಾಗುತ್ತದೆ.

ಕನ್ನಡ ಕಾದಂಬರಿ ಪರಂಪರೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅದು ಪರೋಕ್ಷವಾಗಿ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆ ಕೂಡ ಆಗಿರುವುದು ಗಮನಕ್ಕೆ ಬರುತ್ತದೆ ಒಂದು ಶತಮಾನದ ಕಾಲಭಿತ್ತಿಯಲ್ಲಿ ಒಂದು ಕುಟುಂಬದವರೇ ಊರಿನ ಅಥವಾ ಪ್ರದೇಶದ ಕತೆಯನ್ನು ಹಿಡಿಯುತ್ತಲೆ, ಆ ಸೀಮೆಯ ಸಮುದಾಯದ ಕಥೆಯೂ ಆಗುವ ಕೆಲಸವನ್ನು ಕನ್ನಡದ ಮುಖ್ಯ ಕಾದಂಬರಿಗಳು ಮಾಡುತ್ತವೆ.

ಈಹಿನ್ನಲೆಯಲ್ಲಿ ಕನ್ನಡ ಸಾಹಿತ್ಯ ಕಾದಂಬರಿ ಪರಂಪರೆಯನ್ನು ನೋಡಿದಾಗ ಸ್ವಾತ್ರಂತ್ರ್ಯೋತ್ತರ ಕಾಲದ ಮೊದಲೆರಡು ದಶಕಗಳು ಕನ್ನಡ ಸಾಹಿತ್ಯದ ದೃಷ್ಟಿಯಿಂದ ತೀವ್ರ ಚಟುವಟಿಕೆಯ ಮತ್ತು ಅತ್ಯುತ್ಸಾಹದ ಅವಧಿ, ಈ ಕಾಲ ಘಟ್ಟದಲ್ಲಿ ಶಿವರಾಮ ಕಾರಂತ ಅನಕೃ, ತರಾಸು, ನಿರಂಜನ ಮುಂತಾದವರು. "೧೮೮೫ ರಲ್ಲಿ ಪ್ರಕಟವಾದ 'ದುರ್ಗೇಶನಂದಿನಿಗೆ' ಬರೆದ ಇಂಗ್ಲೀಷ್ ಪೀಠಿಕೆಯಲ್ಲಿ ವೆಂಕಟಾರ್ಚಾರು 'ನಾವೆಲ್ ಎಂಬ ಪದವನ್ನು ಬಳಸಿದರು ಕಾದಂಬರಿ ಸಮಾಜದ ಹಾಗೂ ಸಮಾಜದ ಅಂಗ ಭೂತನಾದ ಮನುಷ್ಯನ ಚರಿತ್ರೆ, ನಡುವಳಿಕೆಗಳಲ್ಲಿ ಕಂಡು ಬರುವ ದುರ್ನಡತೆ ಮುತಾಂದವುಗಳನ್ನು ಉದಾಹರಣೆಗಳೊಡನೆ ಚಿತ್ರಿಸಿ ಪ್ರತಿ ಒಬ್ಬನೂ ಸದ್ಭಾವದಿಂದ ನಡೆದುಕೊಳ್ಳುವುದನ್ನು ತೋರ್ಪಡಿಸತಕ್ಕದ್ದಾಗಿದೆ."[೨] ಕನ್ನಡ ಮೊದಲ ಕಾದಂಬರಿ ಎನ್ನಲಾದ ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' (೧೮೯೯) ಇದನ್ನು 'ಸದ್ದರ್ಮ ವಿಜಯ' (ಉಪ ಶಿರ್ಷಿಕೆ) ಎಂದು ಕರೆಯಲಾಗುತ್ತದೆ. ಯಾವುದನ್ನು ಸಾಂಪ್ರದಾಯಕ ಸಮಾಜವು ಅಧರ್ಮ ಎಂದು ಕರೆಯುತ್ತದೆಯೊ ಅದನ್ನು ಸಧ್ದರ್ಮ ಎಂದು ಕಾದಂಬರಿ ಪರಂಪರೆ ಶುರುವಾಗುವುದು. ಈ ಹಾದಿಯನ್ನು ಮುಂದಿನ ಕನ್ನಡ ಕಾದಂಬರಿ ಪರಂಪರೆಯು ಸಮರ್ಥವಾಗಿ ಮುಂದುವರಿಸಿಕೊಂಡು ಬಂತು, ವಿಧವೆಯಾಗಿ ಹಲವು

ಕಷ್ಟಗಳನ್ನೆ ಅನುಭವಿಸಿ ಮತ್ತೆ ಮದುವೆಯಾಗಿ ಸಮಾಜದಲ್ಲಿ ಕೋಲಾಹಲವೆಬ್ಬಿಸಿದ ಇಂದಿರಾ, ಈ ಕಾದಂಬರಿಗೆ ಹೆಸರು ಕೊಟ್ಟಿದ್ದಾಳೆ. ಇದರ ನಂತರ ಮುಖ್ಯವಾದ ಕಾದಂಬರಿ ಬೋಳಾರ ಬಾಬುರಾಯರ 'ವಾಗ್ದೇವಿ' ಇಲ್ಲೂ ಧರ್ಮದ ಮುಖಗಳ ಹೊಲಸು ಜೀವನವನ್ನು ಬಯಲಿಗೆಳೆಯುವ ಪ್ರಯತ್ನ ಮಾಡಲಾಗಿದೆ. ವಿವಿಧ ಘಟನೆಗಳಿಂದ ಕೂಡಿದ ಕಥೆ ಕುತೂಹಲಕರದಿಂದ ಕೂಡಿದೆ, ಈ ಕಾದಂಬರಿಯಿಂದ ಹಾಸ್ಯ ಕಾಲಿಟ್ಟಿರುವುದು ಎನ್ನಬಹುದಾಗಿದೆ.

ನಂತರ ಬಂದಂತಹ ಕೆರೂರು ವಾಸು ದೇವಾಚಾರ್ಯರ 'ಇಂದಿರೆ ' (೧೯೦೮) ಆದರ್ಶ ಸ್ತ್ರೀಯ ಚಿತ್ರವನ್ನು ನೀಡುತ್ತದೆ.' ಮುದ್ರಾಮಂಜೂಷ 'ಪ್ರಥಮ ಐತಿಹಾಸಿಕ ಕಾದಂಬರಿ ಎನ್ನಬಹುದು, ನಂತರಬಂದ ಕುವೆಂಪುರವರ ಮಲೆಯಗಳಲ್ಲಿ ಮದುಮಗಳು, ಗ್ರಾಮಾಯಾಣ (ರಾವ್ ಬಹದ್ದೂರ್), ಚೋಮನದುಡಿ(ಕಾರಂತ), ಚಿಕ್ಕವೀರ ರಾಜೇಂದ್ರ (ಮಾಸ್ತಿ), ಮುಕ್ತಿ (ಶಾಂತಿನಾಥ ದೇಸಾಯಿ), ಸಂಸ್ಕಾರ(ಅನಂತಮೂರ್ತಿ), ಚಿದಂಬರ ರಹಸ್ಯ(ತೇಜಸ್ವಿ), ಸೂರ್ಯ (ಬರಗೂರುರಾಮಚಂದ್ರಪ್ಪ), ಕುಸುಮ ಬಾಲೆ(ದೇವನೂರಮಹಾದೇವ), ಮುತಾಂದ ಕಾದಂಬರಿಗಳು ಜನಪ್ರಿಯ ಕಾದಂಬರಿಗಳಲ್ಲಿ. ಇದಕ್ಕೆ ಮುನ್ನ ಜನಪ್ರಿಯ ಕಾದಂಬರಿ ಎಂದರೇನು ಎಂಬುದರ ಬಗೆಗೆ ಅಲೋಚಿಸಿದಾಗ, ಕಾದಂಬರಿ ರಚನೆ ಸಾಧ್ಯವಾಗುವುದು, ಓದುಗರ ವೃಂದ ಸಾಕಷ್ಟು ಹಿಂದಾಗಿದ್ದಾಗ ಕಾವ್ಯದಂತೆ ಇದು ಇಬ್ಬರು ಓದಿ ನೂರು ಜನ ಕೇಳಿ ಸಂತೋಷಪಡಲು ಸಾಧ್ಯವಾಗುವ ರಚನೆಯಲ್ಲ ಅಚ್ಚುಕೂಟಗಳು ಪುಸ್ತಕಗಳ ಸಾಗಾಣಿಕೆ-ಮಾರಾಟ. ಇವುಗಳ ವ್ಯವಸ್ಥೆ ಬೆಳೆದು ಅಕ್ಷರಸ್ಥರ ಮತ್ತು ಓದಲು ವಿರಾಮವಿರುವವರ ಸಂಖ್ಯೆ ಸಾಕಷ್ಟು ಆದಾಗ ಸಾಹಿತ್ಯದಲ್ಲಿ ತಮ್ಮ ಜೀವನವನ್ನು ಕಾಣುವ ಆಸಕ್ತಿ ಇರುವ ವರ್ಗ ಬೆಳೆದಾಗ ಕಾದಂಬರಿ ಬೆಳೆಯ ಬಲ್ಲವು, ಇಂತಹ ಸಂಧಿಗ್ಧತೆಯಲ್ಲಿ ಓದುಗರನ್ನು ಆಕರ್ಷಿಸುವ ಕುತೂಹಲವನ್ನು ತಣಿಸುವಂತಹ ಕಾದಂಬರಿಗಳು ಬರಬೇಕು. ಆಗ ಮಾತ್ರ ಆ ಕಾದಂಬರಿಗಳು ಜನಪ್ರಿಯ ಕಾದಂಬರಿಗಳೆನಿಸಿಕೊಳ್ಳುತ್ತವೆ.

ಒಂದು ಕಾದಂಬರಿ ಜನಪ್ರಿಯ ಕಾದಂಬರಿ ಎನಿಸಿಕೊಳ್ಳಬೇಕಾದರೆ
ಈ ಕೆಳಗಿನ ಲಕ್ಷಣಗಳನ್ನು ಒಳಗೊಂಡಿರಬೇಕು.

೧) ಕಾದಂಬರಿಗಾರ ಓದುಗರನ್ನೇ ಅರ್ಥ ಮಾಡಿಕೊಂಡು ದೃಷ್ಟಿಯಲ್ಲಿಟ್ಟುಕೊಂಡು ಅವರ ಅಭಿರುಚಿಗೆ ತಕ್ಕಂತೆ ರಚನೆ ಮಾಡಿರಬೇಕು.

೨) ಸಾಮಾನ್ಯರ ಜೀವನ, ಸಾಮಾಜಿಕ ಜೀವನ ಇವುಗಳಿಗೆ ಸಮೀಪಿಸಿರಬೇಕು.

೩) ಓದುಗರ ಕುತೂಹಲವನ್ನು ಕೆರಳಿಸುವಂತಿರಬೇಕು.

೪) ಸಾಮಾನ್ಯರಿಗೆ ಸಾಮಾನ್ಯ ಬೆಲೆಗೆ ಎಟುಕುವಂತಿರಬೇಕು.

ಈ ಲಕ್ಷಣಗಳನ್ನು ಹೊಂದಿದ ಕಾದಂಬರಿಗಳು ಜನಪ್ರಿಯ ಕಾದಂಬರಿಗಳಾಗಿರುತ್ತವೆ

ಈ ನಿಟ್ಟನಲ್ಲಿ ಹೊರಬರುವ 'ಇಂದಿರಾಬಾಯಿ' ಕಾದಂಬರಿಯ ನಂತರ ಬಂದ ಸಾಹಿತ್ಯದ ದೃಷ್ಟಿಯಿಂದ ಕಾದಂಬರಿ ಎಂದು ಹೇಳಬಹುದಾದ ಮೊಟ್ಟ ಮೊದಲನೆಯ ಕೃತಿ ಎಂ.ಎಸ್.ಪುಟ್ಟಣ್ಣನವರನವರ (೧೮೫೪-೧೯೩೦) 'ಮಾಡಿದುಣ್ಣೋ ಮಹರಾಯ' (೧೯೧೫) "ಪುರಾಣ ಪ್ರಸಿದ್ದರು ವ್ಯಾಕರಣದ ಸೂತ್ರಗಳಾಗಿದ್ದರೆ, ಮನುಷ್ಯ ಸಾಮಾನ್ಯರಲ್ಲಿ ಸಿಕ್ಕುವ ಧೀರರು ಉದಾಹರಣೆಗಳಾಗಿದ್ದರೆ ನೀತಿಭೋಧನೆ ಈ ಕಾದಂಬರಿಯಲ್ಲಿ ಪಾತ್ರಗಳನ್ನು ಸೃಷ್ಟಿಸಿದ ಕಾದಂಬರಿಕಾರರು ಮನಷ್ಯ ಸ್ವಭಾವದಲ್ಲಿ ಅದರ ವೈವಿಧ್ಯ ವೈಚಿತ್ರ್ಯಗಳಲ್ಲಿ ಆಸಕ್ತಿ ಇರುವವರು, ಜೊತೆಗೆ ಪುಟ್ಟಣ್ಣನವರು ಕ್ರಿಯೆ ನಡೆಯುವ ಆವರಣವನ್ನು ಜೀವಂತವಾಗಿ ಸೃಷ್ಟಿಬಿಡುತ್ತಾರೆ"

ಹಳ್ಳಿ ಹಳ್ಳಿ ಪಾಠಶಾಲೆ ರಾಜರ ಆಸ್ಥಾನ, ಲಂಚಕೋರ,ಅಧಿಕಾರಿಯ ಮನೆ ಎಲ್ಲಾ ನಮ್ಮ ಕಣ್ಣ ಮುಂದೆ ನಿಲ್ಲುತ್ತವೆ. ಮಾತನಾಡುವವರ ಮಾತು ಕೇಳಿಸುತ್ತದೆ. ಮುಖ ಕಾಣಿಸುತ್ತದೆ. ಹರಿತವಾದ ಸ್ಫುಟವಾದ ಶೈಲಿ ಇವರದು. ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ರಚಿತವಾದ ವೆಂಕಟಚಾರ್ಯ, ಗಳಗನಾಥ, ಎಂ.ಎಸ್.ಪುಟ್ಟಣ್ಣ ಇವರಿಂದ ಪ್ರಾರಂಭದಲ್ಲಿಯೇ ಕನ್ನಡ ಕಾದಂಬರಿ ಮನರಂಜನೆಯ ಸಾಧನವಾಗದೆ ಜೀವನವನ್ನು ಗಂಭೀರವಾಗಿ ವಿಕ್ಷಿಸುವ ಕ್ರಿಯೆಯಾಯಿತು.

ಇಪ್ಪತ್ತನೆ ಶತಮಾನದ ನಂತರದಲ್ಲಿ ಬಂದ ನಾಲ್ಕನೆಯ ದಶಕದಲ್ಲಿ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಅಧಿಕ ಕಾದಂಬರಿಗಳು ಹೊರಬರಲು ತೊಡಿಗಿದವು, ನಡೆದಾಡುವ ವಿಶ್ವಕೋಶ ಎಂದು ಕರೆಯುವ ಶಿವರಾಮ ಕಾರಂತರು-ದೇವ ದೂತರು, ಬೆಟ್ಟದ ಜೀವ, ಮರಳಿ ಮಣ್ಣಿಗೆ, ಚೋಮನ ದುಡಿ, ಬೆಟಗೇರಿ ಕೃಷ್ಣ ಶರ್ಮರ-ಸುದರ್ಶನ ಕಾದಂಬರಿಯು (ಆನಂದಕಂದ), ಶ್ರೀಮುಗುಳಿಯವರ ಬಾಳುರಿ, ಅ.ನ.ಕೃಷ್ಣರಾಯರ-'ಜೀವನಯಾತ್ರೆ' ಮತ್ತು ಉದಯರಾಗ, ಸಂಧ್ಯಾಂಗ, ಶ್ರೀರಂಗರ ವಿಶ್ವಾಮಿತ್ರ, ಗೋಕಾಕ್‌ರ ಇಜ್ಜೋಡು, ಜಡಭರತನ ಧರ್ಮಸೆರೆ ೧೯೩೩ ರಲ್ಲಿ ಕುವೆಂಪುರ 'ಕಾನೂರು ಸುಬ್ಬಮ್ಮ ಹೆಗ್ಗಡತಿ'.

ಸ್ವಾತಂತ್ರ ಸಂಗ್ರಾಮಗಳನ್ನು ವಸ್ತುವಾಗಿವುಳ್ಳ ಕಾದಂಬರಿಗಳಲ್ಲಿ ಅಂದಿನ ಜೀತದಾಳೂಗಳ ಬಗೆಗೆ ಕಾರಂತರು ಮನುಷ್ಯನ ಬದುಕಿನ ಸಾಮರ್ಥ್ಯವನ್ನೇ ಕಾಣುವುದು ಕ್ರಿಯೇಟೀವ್ ಆಗಿ ಇತರರ ಬಾಳನ್ನೇ ಅರಳಿಸುವುದು.ಇವರಿಗೆ ಉಸಿರಾಡುವಷ್ಟು ಸಹಜ. ಪ್ರತಿಭಾವಂತ ಕಾದಂಬರಿಕಾರ, ಮರಳಿ ಮಣ್ಣಿಗೆ, ಬೆಟ್ಟದ ಜೀವ, ಮೈಮನಗಳ ಸುಳಿಯಲ್ಲಿ, ಅಳಿದ ಮೇಲೆ, ಮೂಕಜ್ಜಿಯ ಕನಸುಗಳು, ರಾವ್‌ಬಹದ್ದೂರ್, ವ್ಯಾಸರಾಯ ಬಲ್ಲಾಳ, ಅನಂತಮೂರ್ತಿ, ಎಸ್.ಎಲ್.ಭೈರಪ್ಪ ಮುಂದಿನ ಪಂಥದ ಕಾದಂಬರಿಗಳತ್ತ ಕಣ್ಣು ಹೊರಳಿಸುವ ಮುನ್ನ ಗಮನಿಸುವ ಒಂದೆರಡು ಅಂಶಗಳಿವೆ. ಹಾಸ್ಯ ವಿಂಡಬನೆ, ಎರಡೂ ಕಾದಂಬರಿಗಳಲ್ಲಿ ಅಲ್ಲಲ್ಲಿ ಹಣಿಕೆ ಹಾಕಿದೆ ಎಂ.ಆರ್.ಶ್ರೀಯವರ, 'ರಂಗಣ್ಣನ ಕನಸಿನ ದಿನಗಳು ಕಸ್ತೂರಿಯವರ ಗಾಳಿಗೋಪುರ, ಚಕ್ರದೃಷ್ಟಿ, ಶಂಖವಾದ್ಯ, ಗೃಹದಾರಣ್ಯದ ತೀಕ್ಷ್ಣ ವಿಂಡಬನೆ' ಕಾರಂತರ ದೇವದೂತರು, ಶ್ರೀರಂಗರ 'ವಿಶ್ವಾಮಿತ್ರ ಸೃಷ್ಟಿ' ಇಂತಹ ಕೃತಿಗಳಲ್ಲಿ ಕಾಣುತ್ತದೆ,

ಈ ಶತಮಾನದ ೫ನೇಯ ದಶಕದಲ್ಲಿ ಪ್ರಾರಂಭವಾದ ಪ್ರಗತಿಶೀಲ ಚಳುವಳಿಯಲ್ಲಿ ಕಾದಂಬರಿ ಕ್ಷೇತ್ರದಲ್ಲಿ ಮುಖ್ಯವಾಗಿ ಫಳಗಿದವರು ಅನಕೃ. ಅವರು ಜೀವನದ ಯಾವ ಅನುಭವವನ್ನೇ ಆಗಲಿ ಮೈಲಿಗೆ ಎಂದು ಅಶ್ಲೀಲ ಎಂದು ಸಾಹಿತ್ಯದಿಂದ ಹೊರಗಿಡ ಬಾರದೆಂದು ದೂಡದೆ, ಅವರ ಮೊದಲ ಕಾದಂಬರಿ ಜೀವನಯಾತ್ರೆಯಲ್ಲಿಯೇ ಕಾಮದ ಪ್ರಶ್ನೆಯನ್ನೇತ್ತಿಕೋಂಡರು. ನನ್ನ ಸತ್ಯ, ಶನಿ ಸಂತಾನ, ಸಂಜೆಗತ್ತಲು, ಅಪರಂಜಿ, ಕಬ್ಬಿಣದ ಕಾಗೆ ಮೊದಲಾದ ಕಾದಂಬರಿಗಳಲ್ಲಿ ವೇಶ್ಯ ಸಮಸ್ಯೆಗಳನ್ನು ವಸ್ತುವಾಗಿಸಿ ಆರಿಸಿಕೊಂಡರು. ನಿರಂಜನರವರ ಅದ್ಭುತ ಕಾದಂಬರಿಗಳಾದ ಚಿರಸ್ಮರಣೆ, ಮೃತ್ಯುಂಜಯ, ದಲ್ಲಿ "ಇತಿಹಾಸದ ನಿರ್ಮಾತೃಗಳು ಸಾಮಾನ್ಯಜನರೇ ಎಂಬ ಸರ್ವಕಾಲಿಕ ಸತ್ಯವನ್ನು" ತಮ್ಮ ನಿರೂಪಣೆಗೆ ಆಧಾರ ಮಾಡಿ ಕೊಂಡಿದ್ದಾರೆ. ನಂತರ ದೇಶದ ಸ್ವಾತಂತ್ರ್ಯ ಸಮರವನ್ನು ಚಿತ್ರಿಸುವ ಕಾದಂಬರಿಗಳು ಐತಿಹಾಸಿಕ ಕಾದಂಬರಿಗಳೇ, ಐತಿಹಾಸಿಕ ಕಾದಂಬರಿಗೆ ಕನ್ನಡದಲ್ಲಿ ದೀರ್ಘಕಾದ ಚರಿತ್ರೆ ಉಂಟು. ಗಳಗನಾಥ, ವೆಂಕಟಚಾರ್ಯರು, ಕುಮುದಿನಿ, ದೇವುಡು ನರಸಿಂಹಶಾಸ್ತ್ರಿಯವರ ಮಯೂರ ನಂತರ ಆನಂದಕಂದ, ವೀರಕೇಸರಿ, ಸೀತಾರಾಮಶಾಸ್ತ್ರಿ, ಕೊರಟೆ ಶ್ರೀನಿವಾಸರಾವ್,

ಇನ್ನು ಮುಂತಾದ ಕಾದಂಬರಿಗಾರರು ಐತಿಹಾಸಿಕ ಕಾದಂಬರಿಗಳನ್ನು ರಚಿಸಿದವರಲ್ಲಿ ಕೆಲವರು. ಕನ್ನಡದಲ್ಲಿ ಬಂದ ಬಹುಸಂಖ್ಯೆಯ ಐತಿಹಾಸಿಕ ಕಾದಂಬರಿಗಳ ಉದ್ದೇಶ ಭಾರತೀಯರ ಮತ್ತು ಕನ್ನಡಗರ ಗತ ವೈಭವವನ್ನು ಪರಿಚಯಮಾಡಿಕೊಡುವುದೆಯಾಗಿದೆ.

ಈ ನಂತರ ೫೦೦ ದಶಕದಲ್ಲಿ ಬಂದ ಮಹಿಳಾ ಕಾದಂಬರಿಗಾರ್ತಿಯರಲ್ಲಿ ತ್ರಿವೇಣಿಯವರು ಪ್ರಮುಖರು ಮೂವತ್ತೈದನೆಯ ವಯಸ್ಸಿಗೆ ತೀರಿಕೊಂಡ ತ್ರಿವೇಣಿ (೧೯೨೮-೧೯೬೩) ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ. ಸ್ತ್ರೀಯರು ಹೆಚ್ಚಾಗಿ ಬರೆಯದೇ ಇದ್ದ ಕಾಲದಲ್ಲಿ ಬರೆಯಲು ಪ್ರಾರಂಭಿಸಿ. ಕೆಲವೇ ವರ್ಷಗಳಲ್ಲಿ ಅಸಾಧಾರಣ ಜನಪ್ರಿಯತೆ ಗಳಿಸಿದವರು ಎಂಬುದು ಒಂದು ಕಾರಣ, ಬಹುಚಿಕ್ಕ ವಯಸ್ಸಿನಲ್ಲೆ ತೀರಿಕೊಂಡರೆಂಬುದು ಎರಡನೆಯ ಕಾರಣ. ಹೀಗಾಗಿ ಅವರು ಓದುಗರ ಮಮತೆಯನ್ನು ಪಡೆದಿದ್ದಾರೆ. ೧೯೫೩ ರಲ್ಲಿ ಅವರ ಮೊದಲನೆಯ ಕಾದಂಬರಿ ಪ್ರಕಟಣೆ, ತ್ರೀವೇಣಿ ಕಾದಂಬರಿಯ ಸೃಷ್ಟಿಯಲ್ಲಿ ಮನಶ್ಯಾಸ್ತ್ರದ ತಿಳುವಳಿಕೆಯನ್ನು ಉದ್ದೇಶ ಪೂರ್ವಕವಾಗಿ ಬಳಸಲು ಪ್ರಯತ್ನಿಸಿದರು ಮನಶ್ಯಾಸ್ತ್ರ ಮನುಷ್ಯನ ಅಧ್ಯಯನದ ವಿಶಿಷ್ಟ ಕ್ಷೇತ್ರವಾಗುವ ಮುನ್ನವೇ ಸಾಹಿತ್ಯ ರಚನೆ ಮಾಡಿದ ಕವಿಗಳು ಮನುಷ್ಯನ ಮನಸನ್ನು ಅರ್ಥಮಾಡಿಕೊಂಡಿದ್ದರು. ಸಾಹಿತ್ಯ ಕೃತಿಯಲ್ಲಿ ಪಾತ್ರಗಳ ಸ್ವಭಾವ ನಡೆನುಡಿಯಲ್ಲಿ ಜೀವನವನ್ನು ಎದುರಿಸುವ ಅಥವಾ ಎದುರಿಸಲು ಹಿಂಜರಿಯುವ ರೀತಿಯಲ್ಲಿ ಪ್ರಕಟವಾಗಬೇಕು ಎಂಬುವುದು ನೆನಪಿನಲ್ಲಿಡಬೇಕಾದ ಅಂಶ.

ತ್ರಿವೇಣಿಯವರು ಮನಶ್ಯಾಸ್ತ್ರವನ್ನು ಕ್ರಿಯೆಯಲ್ಲಿ ಅರಗಿಸಿಕೊಳ್ಳಲು ಶಕ್ತರಾದಾಗ ಯಶಸ್ವಿಯಾಗುತ್ತಾರೆ. ಇವರ ಮನೋವೈಜ್ಞಾನಿ ಕಾದಂಬರಿಗಳಲ್ಲಿ ಗಂಡು ಹೆಣ್ಣಿನ ಸಹಜೀವನ. ಅವರ ಕಾದಂಬರಿಗಳ ವಸ್ತು, ಅಂತಃಕರಣದ ಪುರುಷನ ಪ್ರೇಮ ತಾಯ್ತನದ ಹಿಗ್ಗು ಇವನ್ನು ಹೆಣ್ಣು ಎಷ್ಟರ ಮಟ್ಟಿಗೆ ಬಯಸುತ್ತಾಳೆ ಎಂಬುದನ್ನು ಹೆಣ್ಣಿನ ದೃಷ್ಟಿಯಿಂದ ನಿರೂಪಿಸುತ್ತಾರೆ. ೧೯೬೩ ರಲ್ಲಿ ಪ್ರಕಟವಾದ ತ್ರಿವೇಣಿ ಮನೋವಿಜ್ಞಾನವನ್ನು ಬಳಸಿದುದರಿಂದ ಅವರು ಹೊಸ ಹಾದಿಯನ್ನು ಹಿಡಿದರು ಎಂದು ತೋರಿದರೂ ಬಳಸುವುದರಿಂದ .ಅವರ ಕಾದಂಬರಿಗಳ ಮೌಲ್ಯಗಳು ಅಂದಿನವರೆಗೆ ಕಂಡುಬಂದಿದ್ದು ಮೌಲ್ಯಗಳಿಂದ ಭಿನ್ನವಾಗಿರಲಿಲ್ಲ.

ಕನ್ನಡ ಕಾದಂಬರಿಗಳ – ಕಥೆಗಳ ಚರಿತ್ರೆಯಲ್ಲಿ ಮಹಿಳೆಯ ಉತ್ಸಾಹದ ಅಧ್ಯಾಯವನ್ನೇ ಅವರು ತೆರೆದರು ಎನ್ನಬೇಕು. ಎರಡು ದಶಕಗಳಲ್ಲಿ ಸುಮಾರು ಒಂದು ನೂರು ಮಂದಿ ಮಹಿಳೆಯರು ಕಾದಂಬರಿಗಳನ್ನು ಪ್ರಕಟಿಸಿದ್ದಾರೆ. ಸಾಹಿತ್ಯಕ್ಕಾಗಲೀ ಸಾಹಿತ್ಯ ವಿಮರ್ಶೆಗಾಗಲೀ ಲಿಂಗವಿಲ್ಲ, ವಯಸ್ಸಿಲ್ಲ ಎಂಬುದನ್ನು ನೆನಪಿಟ್ಟುಕೊಂಡು ವಿಮರ್ಷಿಸಿದಾಗ ಒಟ್ಟಿನಲ್ಲಿ ಮಹಿಳೆಯರು ಕೊಟ್ಟಿರುವ ಕೊಡುಗೆ ಗಮನಾರ್ಹ.

<u>ಅಡಿ ಟಿಪ್ಪಣಿ</u>

೧. ಕನ್ನಡ ಸಾಹಿತ್ಯ ಕೋಶ– ರಾಜಪ್ಪ ದಳವಾಯಿ
ಶ್ರೀ ರಾಘವೇಂದ್ರ ಪ್ರಕಾಶನ – ಬೆಂಗಳೂರು
೨. ಹೊಸಗನ್ನಡ ಸಾಹಿತ್ಯ ಚರಿತ್ರೆ, ಎಲ್.ಎಸ್.ಶೇಷಗಿರಿರಾವ್.

## ಅಧ್ಯಾಯ - ೩

## ತ್ರಿವೇಣಿಯವರ ಜೀವನ ಮತ್ತು ಸಾಹಿತ್ಯ

"ಸಾಧಕರಿಗೆ ಬಾಧಕಗಳೆ ವರಗಳಂತೆ". ಏನೇ ಅಡೆತಡೆಗಳು ಬಂದರೂ, ಸಮಯ ಎಷ್ಟೇ ಅಲ್ಪವಿದ್ದರೂ ಅವೆಲ್ಲವನ್ನೂ ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡು ಯಶಸ್ವಿಯಾಗುವ ಜಾಣ್ಮೆ ಸಾಧಕರದು. ಅದು ಕೆಲವರಿಗೆ ಮಾತ್ರವೇ ಲಭ್ಯ, ಆ ಸಾಲಿನಲ್ಲಿ ನಮ್ಮ ಜನಪ್ರಿಯ ಲೇಖಕಿ ತ್ರಿವೇಣಿಯವರು ಸೇರುತ್ತಾರೆ. ಬದುಕಿದ್ದು ಅಲ್ಪವಾದರೂ ಸಾಧಿಸಿದ್ದೂ ಅಪಾರ, ಜೀವನದ ಹಾದಿಯಲ್ಲಿ ಏನೆಲ್ಲಾ ತೊಡರುಗಳೂ ಬಂದರೂ ಅದನ್ನು ಧೈರ್ಯವಾಗಿ ಮನ್ನುಗ್ಗಿ ಎದುರಿಸುವ ದಿಟ್ಟೆ ತ್ರಿವೇಣಿಯವರು. ತಮ್ಮ ಜೀವಿತದ ಅವಧಿಯಾದ ೩೫ ವರ್ಷಗಳಲ್ಲೇ ಸಾಹಿತ್ಯ ಲೋಕದಲ್ಲಿ ಮಿನುಗುವ ತಾರೆಯಾಗಿ ಬೆಳಗಿದವರು ಇಂದಿಗೂ ಸಾಹಿತ್ಯ ಲೋಕ ನೆನಪಿಸಿಕೊಳ್ಳುವ ಒಬ್ಬ ಲೇಖಕಿ ತ್ರಿವೇಣಿ.

### ತ್ರಿವೇಣಿಯವರ ಬಾಲ್ಯ

'ಹುಟ್ಟುತ್ತಲೆ ಚಿನ್ನದ ಚಮಚವನ್ನು ಬಾಯಲ್ಲಿ ಇಟ್ಟುಕೊಂಡು ಹುಟ್ಟುವವರೂ ಅಗರ್ಭ ಶ್ರೀಮಂತರಾದರೆ', 'ಸಾಹಿತ್ಯ ಸುಗಂಧ ಬೀರುವ ತೊಟ್ಟಿಲಲ್ಲೆ ಹುಟ್ಟುವ ಭಾಗ್ಯ ತ್ರಿವೇಣಿಯವರದು'. ಕನ್ನಡದ ಕಣ್ವರೆಂದು ಪ್ರಖ್ಯಾತಿಯಾದ ಬಿ.ಎಂ.ಶ್ರೀಯವರ ತಮ್ಮನಾದ ಬಿ.ಎಂ ಕೃಷ್ಣಸ್ವಾಮಿಯವರ ಮತ್ತು 'ವಾಣಿ' ಎಂಬ ಕಾವ್ಯನಾಮದೊಂದಿಗೆ ಕನ್ನಡ ಸಾಹಿತ್ಯದಲ್ಲಿ ಜನಪ್ರಿಯಾರಾಗಿದ್ದ ಶ್ರೀಮತಿ ಸುಬ್ಬಮ್ಮನವರ ಸೋದರಿಯಾದ ತಂಗಮ್ಮನವರ ದ್ವಿತೀಯ ಪುತ್ರಿಯಾಗಿ ಮಂಡ್ಯದಲ್ಲಿ ಸೆಪ್ಟಂಬರ್ ೧, ೧೯೨೮ ರಂದು ತ್ರಿವೇಣಿಯವರು ಜನಿಸಿದರು.

ತ್ರಿವೇಣಿ ಇವರ ಕಾವ್ಯನಾಮವಾದರೆ 'ಭಾಗೀರಥಿ' ಇವರ ನಿಜನಾಮ, ಮಂಡ್ಯದಲ್ಲಿ ಶಾಲೆಗೆ ಸೇರಿಸುವಾಗ ಭಾಗೀರಥಿಯ ಹೆಸರನ್ನು 'ಅನಸೂಯ' ಎಂದು ಬದಲಾಯಿಸಿದರು, ಮನೆಯಲ್ಲಿ ಮಾತ್ರ ಎಲ್ಲರೂ ಪ್ರೀತಿಯಿಂದ 'ಅಂಚು' ಎಂದು ಕರೆಯುತ್ತಿದ್ದರು ಮಂಡ್ಯದಲ್ಲಿ ಪ್ರಾಥಮಿಕ ಮತ್ತು ಹೈಸ್ಕೂಲ್ ಶಿಕ್ಷಣವನ್ನು ಮುಗಿಸಿದ ನಂತರ ಉನ್ನತ ಶಿಕ್ಷಣಕ್ಕಾಗಿ ತನ್ನ ಅಜ್ಜಿಯ ಊರಾದ ಮೈಸೂರಿಗೆ ಹೋದರು. ಅಲ್ಲಿನ ಮಹಾರಾಜಾ ಕಾಲೇಜಿನಲ್ಲಿ ಮನಶ್ಯಾಸ್ತ್ರವನ್ನು ಮುಖ್ಯ ವಿಷಯವನ್ನಾಗಿ ಆಯ್ಕೆ ಮಾಡಿಕೊಂಡರು, ವ್ಯವಸ್ಥಿತವಾಗಿ ಆಸಕ್ತಿಯಿಂದ ಅಭ್ಯಾಸ ಮಾಡಿದ ಅನಸೂಯರವರು ೧೯೪೭ರಲ್ಲಿ ಬಿ.ಎ ಪದವಿಯನ್ನು 'ಸಿದ್ದೇಗೌಡ ಚಿನ್ನದ ಪದಕ' ಮತ್ತು 'ತಾತಯ್ಯ ಕ್ಯಾಶ್ ಬಹುಮಾನ' ಪಡೆಯುವುದರೊಂದಿಗೆ ಮುಗಿಸಿದರು. ವ್ಯಾಸಂಗದಲ್ಲಿ ಪಾದರಸದಂತೆ ಚಟುವಟಿಕೆಯಿಂದ ಅನಸೂಯರವರಿಗೆ ಮುಂದಿನ ದಿನಗಳಲ್ಲಿ ಅಸ್ತಮ ಎಂಬ ಅನಾರೋಗ್ಯದ ಭೂತ ಅವರನ್ನು ಕಾಡಲು ಶುರುಮಾಡಿತು.

### ಅನಸೂಯ ತ್ರಿವೇಣಿಯಾಗಿ ಬದಲಾವಣೆ

ಪದವೀಧರೆಯಾಗಿದ್ದ ಅನಸೂಯ ಮಂಡ್ಯದಲ್ಲಿ ಹಿಂದಿ ಭಾಷೆಯನ್ನು ಅಭ್ಯಾಸಮಾಡಲು ಪ್ರಾರಂಭಿಸಿದರು. ಅಗಲವಾದ ಮುಖ ಹೊಳೆಯುವ ಬೊಗಸೆ ಕಣ್ಗಳು, ಉದ್ದವಾದ ಮೂಗು, ಸಾಧಾರಣ ಎತ್ತರದ ಆಕರ್ಷಕ ಮೈಕಟ್ಟು, ನೀಳವಾದ ಕಪ್ಪು ಕೇಶರಾಶಿ ಹೊಂದಿದ್ದ ಅನಸೂಯ ತಮ್ಮ ಗೆಳತಿಯರನ್ನ ಆಕರ್ಷಿಸುತ್ತಿದ್ದುದು ಸಹಜವೇ ಆಗಿತ್ತು. ಈ

ಅವಧಿಯಲ್ಲಿ ಹೆಚ್ಚು ಪರಿಚಯವಾದ ಗೆಳತಿ ಶ್ರೀಮತಿ ಎಂ.ಕೆ ಇಂದಿರಾ. "ಅನಸೂಯಯವರ ತಾಯಿ ತಂಗಮ್ಮರವರೇ ಹೇಳುವಂತೆ ಅವರ ಮಗಳಿಗೆ ತುಂಬಾ ಸೊಂಪಾದ ಉದ್ದ ಕೂದಲು ಇದ್ದುದರಿಂದ ಅವರ ಗೆಳತಿಯೊಬ್ಬರು ಇವರಿಗೆ ಎರಡು ಜಡೆ ಹಾಕಿ ಕೊಳ್ಳಲು ಸೂಚಿಸಿ, ತನಗೇನಾದರೂ ಅಷ್ಟೊಂದು ಒತ್ತಾದ ನೀಳ ಕೂದಲಿದ್ದಿದ್ದರೆ ತಾನೂ 'ಟೂ ವೇಣಿ'ಯಾಗಿ ಬಿಡುತ್ತಿದ್ದುದಾಗಿ ತಿಳಿಸಿದರಂತೆ ಆಗ ಅಲ್ಲೇ ಅವರ ಗುಂಪಿನಲ್ಲಿದ್ದ ಎಂ.ಕೆ.ಇಂದಿರಾ ಅವರು ಕೂಡಲೆ "ನಿಜ ಎರಡೇಕೆ ಮೂರು ಜಡೆ ಹಾಕಿಕೊಂಡು 'ತ್ರಿವೇಣಿ'ಯಾಗಬಹುದು ನೀನು ಎಂದು ಹೇಳಿದರಂತೆ. ಅನಸೂಯ ತಟ್ಟನೆ ಇಂದಿರಾ ಅವರತ್ತ ತಿರುಗಿ

'ಹೌದು, ಎಷ್ಟು ಚೆನ್ನ'! "ನಾನು ಮೂರು ಕಾಲಿನ ಒಂದೇ ಜಡೆ ಹಾಕಿಕೊಂಡು 'ತ್ರಿವೇಣಿ' ಆಗ್ತೇನೆ"- ಎಂದು ತಿಳಿಸಿದರಂತೆ.[೧] ಅಂದಿನಿಂದ ಅನಸೂಯ ತ್ರಿವೇಣಿಯಾದರು, ಆದರೆ ಇತ್ತೀಚೆಗೆ ಬೆಳಕಿಗೆ ಬಂದ ತ್ರಿವೇಣಿಯವರ ಒಂದು ಅಪರೂಪದ ಕಾಗದದಲ್ಲಿ ಅವರ ಕಾವ್ಯ ನಾಮದ ಬಗ್ಗೆ ಹೀಗೆ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. "ಮಹಾತ್ಮಾ ಗಾಂಧಿಯವರ ಅಸ್ಥಿಯನ್ನು ತ್ರಿವೇಣಿ ಸಂಗಮದಲ್ಲಿ ಕದಡಿದರೆಂದು ಹಲವಾರು ಬಾರಿ ಪತ್ರಿಕೆಯಲ್ಲಿ ನೋಡಿದಾಗ ನನಗೆ ಆ ಹೆಸರಿನಲ್ಲಿ ಏನೋ ಒಂದು ಬಗೆಯ ಆಕರ್ಷಕ ಇದ್ದಂತೆ ತೋರಿತು, ನಾನು ಆಗ ತಾನೇ ಸಣ್ಣ ಕತೆಗಳನ್ನು ಬರೆಯಲು ಪ್ರಾರಂಭಿಸಿದ್ದು ಕತೆ ಬರೆಯುವವರೆಲ್ಲ ಕಾವ್ಯನಾಮವನ್ನು ಹೊಂದಿರಲೇ ಬೇಕೆಂಬ ಭಾವನೆಯಿಂದ ನನ್ನ ಸಾಹಿತ್ಯ ರಚನೆಗಳಿಗೆ 'ತ್ರಿವೇಣಿ' ಎಂಬ ಕಾವ್ಯ ನಾಮವನ್ನು ಪ್ರಾರಂಭಮಾಡಿದೆ ಎಂದು, ಆದರೆ ಈಗ ನನಗನ್ನಿಸುತ್ತದೆ ನನ್ನ ಬರವಣಿಗೆಗಳಿಗೆ ನನ್ನ ಹೆಸರೇ ಇದ್ದಿದ್ದರೆ ಚೆನ್ನಾಗಿರುತ್ತಿತ್ತು ಆದರೆ ಕಾರ್ಯ ಕೈಮೀರಿ ಹೋಗಿದೆ"[೨] ಎಂದು ವಿಷಾದದಿಂದ ನುಡಿದರಂತೆ" (ಶ್ರೀ ಸುಬ್ರಹ್ಮಣ್ಯಂ ಅವರಿಗೆ ೧-೮-೧೯೫೭ರಂದು ಬರೆದ ಕಾಗದದಲ್ಲಿ)

<u>ಅನಸೂಯ-ಶ್ರೀಮತಿ ಅನಸೂಯರಾಗಿದ್ದು.</u>

ತಾವು ಪ್ರೇಮಿಸಿದವರನ್ನೇ ವಿವಾಹವಾಗುವ ಭಾಗ್ಯ ಎಲ್ಲಾ ಪ್ರೇಮಿಗಳಿಗೂ ಸಿಗುವುದಿಲ್ಲ ಇಂದಿನ ಆಧುನಿಕಯುಗದಲ್ಲೇ ಕಷ್ಟ ಸಾಧ್ಯ, ಆದರೆ ಅಂದೇ ತ್ರಿವೇಣಿಯವರು ಮೈಸೂರಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಶಂಕರ್ ಮತ್ತು ತ್ರಿವೇಣಿಯವರು ಪರಸ್ಪರ ಪ್ರೇಮಿಸಿ ಮನೆಯವರ ಒಪ್ಪಿಗೆ ಪಡೆಯಲು ಮನೆಯವರಿಗೆ ತಿಳಿಸಿದರು, ಆದರೆ ಅನಸೂಯರ ಅನಾರೋಗ್ಯ ನಿಮಿತ್ತ ಮತ್ತು ಶಂಕರ್ ರವರು ಅನಸೂಯರವರಿಗಿಂತ ಕೇವಲ ಒಂದೂವರೆ ವರ್ಷ ಮಾತ್ರ ದೊಡ್ಡವರು ಎಂಬ ಕಾರಣಕ್ಕೆ ನಿರಾಕರಿಸುತ್ತಾರೆ. ಇಷ್ಟಕ್ಕೆ ಧೈರ್ಯಗುಂದದ ಪ್ರೇಮಿಗಳು ತಮ್ಮಿಬ್ಬರ ವಿವಾಹ ನೆರವೇರದಿದ್ದರೆ ತಮಗೆ ಬೇರೊಬ್ಬರೊಂದಿಗೆ ವಿವಾಹವೇ ಬೇಡವೆಂದು ನಿರ್ಧರಿಸುತ್ತಾರೆ ಇವರ ಪ್ರೀತಿಯ ಮುಂದೆ ಪೋಷಕರೂ ಮಣಿಯಲೇ ಬೇಕಾಯಿತು. ಪರಿಣಾಮವಾಗಿ ನವೆಂಬರ್ ೩೦ ೧೯೫೦ ರಂದು ಶ್ರೀಮಾನ್ ಎಸ್.ಎನ್.ಶಂಕರ್‌ರವರು ಅನಸೂಯರ ಕೈಹಿಡಿಯುವ ಮೂಲಕ ದಾಂಪತ್ಯ ಜೀವನಕ್ಕೆ ಕಾಲಿರಿಸಿದರು. ವಿವಾಹವಾದ ಸ್ವಲ್ಪ ಕಾಲದಲ್ಲಿಯೇ ನಾಗಪುರ ವಿಶ್ವವಿದ್ಯಾಲಯದ ಎಂ.ಎ ಪದವಿ ಪಡೆದು ಶಾರದಾವಿಲಾಸ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿಯನ್ನು ಪ್ರಾರಂಭಿಸಿದರು. ಇದರಿಂದ ಮನೆಯಲ್ಲಿ ಎಲ್ಲಾ ವಿಧದಲ್ಲೂ ಅನುಕೂಲಕರವಾಗಿಯೇ ಇದ್ದರು ಮನೆಯಲ್ಲಿ ಅಡುಗೆಯವರು ಸುತ್ತ ಕೆಲಸಗಳಿಗೆ ಆಳು

ಇದ್ದುದರಿಂದ ಗೃಹಕೃತ್ಯದ ಕೆಲಸಗಳ ಒತ್ತಡ ಶ್ರೀಮತಿ ಅನಸೂಯರಿಗಿರದೆ ವಿರಾಮದಿದಂದ ಇರುತ್ತಿದ್ದರು.

## ಸಾಹಿತ್ಯದ ಹಾದಿ

### ಲೇಖಕಿಯಾಗಿ ಅನಸೂಯ

ತ್ರಿವೇಣಿವರಿಗೆ ಬಿ.ಎಂ.ಶ್ರೀ, ವಾಣಿಯವರಷ್ಟೇ ಅಲ್ಲದೇ ಬಿ.ಸಿ ರಾಮಚಂದ್ರ ಶರ್ಮ, ರಾಜಲಕ್ಷ್ಮೀ, ಎನ್.ಆರ್.ರಾವ್ ಮತ್ತು ಅಶ್ವತ್ಥ ಇವರುಗಳು ಹತ್ತಿರದ ಸಂಬಂಧಿಯಾಗಿದ್ದರಿಂದ ನೀರಿನಲ್ಲಿನ ಮೀನಿನಂತೆ ಅನಾಯಾಸವಾಗಿ ತ್ರಿವೇಣಿ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದರು. ಇವರ ತಂಗಿ ಹಾಗೂ ಕನ್ನಡದ ಜನಪ್ರಿಯ ಕಾದಂಬರಿಗಾರ್ತಿಯೂ ಆದ 'ಶ್ರೀಮತಿ ಆರ್ಯಂಬಾ ಪಟ್ಟಾಭಿಯವರು ಹೇಳುವಂತೆ, ತ್ರಿವೇಣಿಯವರು ಪ್ರಾರಂಭದಲ್ಲಿ ಅನೇಕ ಕಥೆಗಳನ್ನು ಬರೆದು ಅವುಗಳನ್ನು ಯಾರಿಗೂ ತೋರಿಸದಂತೆ ಮುಚ್ಚಿಟ್ಟಿದ್ದರಂತೆ ಒಂದು ಸಲ ಅಕಸ್ಮಾತಾಗಿ ಅವರ ತಾಯಿಯ ಕಣ್ಣಿಗೆ ಅ ಕತೆಗಳು ಬಿದ್ದು, ಅವುಗಳನ್ನು ಓದಿ ಮೆಚ್ಚಿಗೆಯನ್ನು ಸೂಚಿಸಿ ಪ್ರಕಟಿಸಲು ಸಲಹೆಯನ್ನು ನೀಡಿ ಪ್ರೋತ್ಸಾಹಿಸಿದರಂತೆ'[೩]. ಆದರೆ ಅಷ್ಟು ಸುಲಭವಾಗಿ ಇವರೆಣಿಕೆಯಂತೆ ಸಾಹಿತ್ಯಲೋಕ ಇವರನ್ನು ಸ್ವಾಗತಿಸಲಿಲ್ಲ, ೫೦ರ ದಶಕದಲ್ಲಿ ಕಾದಂಬರಿ ಪ್ರಭೇದ ಅತ್ಯಂತ ಜನಪ್ರಿಯವಾಗಿದ್ದರಿಂದ ಸ್ವಲ್ಪಕಾಲದಲ್ಲಿಯೇ 'ಅಪಸ್ವರ' ಎಂಬ ಕಾದಂಬರಿಯನ್ನು ಬರೆದರು. ವಿಷಮ ದಾಂಪತ್ಯವನ್ನು ಸ್ತ್ರೀದೃಷ್ಟಿ ಕೋನದಲ್ಲಿ ರಚಿಸಿರುವ ಈ ಕಾದಂಬರಿಯನ್ನು ಪ್ರಕಟಿಸಲು ಪ್ರಕಾಶಕರನ್ನು ಹುಡುಕುವುದು ಅತ್ಯಂತ ಕಷ್ಟಕರವಾಗಿ ಯಾರೂ ಪ್ರಕಟಿಸಲು ಮುಂದೆ ಬಾರದ ಕಾರಣ ಅವರ ಮೊದಲ ಕಾದಂಬರಿ ಅಪಸ್ವರವಾಗಿಯೇ ಉಳಿಯಿತು.

ಆದರೆ ಈ ಪರಿಸ್ಥಿತಿ ಹೀಗೇಯೇ ಇರಲಿಲ್ಲ ಮುಂದೆ ಅವಕಾಶಗಳ ಬಾಗಿಲು ತೆರೆಯಿತು. ಇವರ ಎರಡನೆ ಕಾದಂಬರಿ 'ಹೂವುಹಣ್ಣು' ಕನ್ನಡ ವಾಚಕ ವೃಂದದ ಭಾಗ್ಯದಿಂದ ಆಗ ತಾನೆ ಸುಲಭ ಬೆಲೆಯ ಕೈ ಹೊತ್ತಿಗೆಗಳನ್ನು ಪ್ರಕಟಿಸಲು ಸಾಹಸ ಮಾಡಿದ್ದ 'ವಾಹಿನೀ' ಪ್ರಕಾಶನದವರು ತ್ರಿವೇಣಿಯ ಕಾದಂಬರಿಯ ಹಸ್ತಪ್ರತಿಯ ವಿಷಯ ತಿಳಿದು ಅದನ್ನು ಪ್ರಕಟಿಸಲು ಮುಂದೆ ಬಂದರು. ಪ್ರಕಟವಾದ ಸ್ವಲ್ಪ ದಿನದಲ್ಲೆ ಕಾದಂಬರಿಯ ಎಲ್ಲಾ ಪ್ರತಿಗಳು ಮಾರಾಟಗೊಂಡವು.

ಮುಂದೆ ಇವರ 'ಬೆಕ್ಕಿನ ಕಣ್ಣು' ಕಾದಂಬರಿ ಪ್ರಕಾಶಕರಲ್ಲಿ ಅಲೆದಾಡುವ ಕೆಲಸವನ್ನು ತಪ್ಪಿಸಿ ಪ್ರಕಾಶಕರೆ ಇವರ ಕಾದಂಬರಿಗಾಗಿ ಅಲೆದಾಡುವ ಕಾಲ ಬಂದಿತು. 'ತ್ರಿವೇಣಿಯವರೇ ಒಂದು ಸಂದರ್ಭದಲ್ಲಿ ಹೇಳುವಂತೆ ಪ್ರಕಾಶಕರ ಕೋರಿಕೆಗಳೆಲ್ಲಾವನ್ನು ಅವರು ಪೂರೈಸಿದ್ದರೆ ಹತ್ತು ವರ್ಷದ ಅವಧಿಯಲ್ಲಿ ಸುಮಾರು ೫೦ ಕಾದಂಬರಿಗಳನ್ನು ಅವರು ಬರೆಯಬೇಕಾಗಿತ್ತು' ಎಂದರಂತೆ.

ಆದರೂ ಜೀವಿತದ ಅವಧಿಯಲ್ಲಿ ೧೯೫೦-೬೩ ರ ಅವಧಿಯಲ್ಲಿ ೩೦ ಕಾದಂಬರಿಗಳನ್ನು ಮತ್ತು ಮೂರು ಸಂಗ್ರಹಗಳಲ್ಲಿ ಹೊರಬಂದ ೪೧ ಕಥೆಗಳನ್ನು ಬರೆದಿದ್ದಾರೆ. ತ್ರಿವೇಣಿಯವರ ಪತಿ ಶಂಕರ್‌ರವರು ಹೇಳುವಂತೆ. "ಅವರು ಬರೆದರೆ ಒಮ್ಮೆಲೆ ಬರೆಯುತ್ತಿದ್ದರು ಕೆಲವೊಮ್ಮೆ ಏನೂ ಬರೆಯಲು ಪ್ರಾರಂಭಿಸಿದರೆ ಒಂದೇ ಸಮನೇ ೮-೧೦ ಗಂಟೆಗಳ ಕಾಲ ಬರೆಯುತ್ತಿದ್ದರು ಇಲ್ಲದಿದ್ದರೆ ಅನೇಕ ದಿನಗಳ ಕಾಲ ಏನನ್ನು ಬರೆಯುತ್ತೀರಲಿಲ್ಲವಂತೆ.

<u>**ಕತೆಗಾರ್ತಿಯಾಗಿ**</u>

ಮೊದಲಿನಿಂದ ಕೊನೆಯವರೆವಿಗೂ ಕೇಳುವವರ ಕೂತುಹಲವನ್ನು ಕೆರಳಿಸಿ ಆಸಕ್ತಿಯನ್ನು ಹೆಚ್ಚಿಸುವ ತಂತ್ರವನ್ನು ಕನ್ನಡದ ಬರಹಗಾರರು ತಮ್ಮ ಕತೆಗಳ ಮೂಲಕ ಮಾಡುತ್ತಾರೆ. ತ್ರಿವೇಣಿಯವರ ಜೀವಿತದ ಅವಧಿಯಲ್ಲಿ ಬೆಳಕು ಕಂಡ ಕಥಾಸಂಕಲನಗಳು 'ಹೆಂಡತಿಯ ಹೆಸರು', 'ಎರಡು ಮನಸ್ಸು', 'ಸಮಸ್ಯೆಯ ಮಗು'. ಈ ಕಥಾಸಂಕಲನಗಳಲ್ಲಿ ಕ್ರಮವಾಗಿ ಹದಿನಾಲ್ಕು ಹನ್ನೆರಡು ಹಾಗೂ ಹದಿನೈದು ಕತೆಗಳು ಪ್ರಕಟವಾಗಿವೆ. ಕಥಾವಸ್ತುಗಳ ದೃಷ್ಟಿಯಿಂದ ಈ ಕಥೆಗಳನ್ನು ಮನೋವಿಶ್ಲೇಷಣೆಗೆ ಸಂಬಂಧಿಸಿದ ಕಥೆಗಳು, ಸಂಸಾರಿಕ ಜೀವನಕ್ಕೆ ಸಂಬಂದಿಸಿದ್ದು ಸಮಾಜ ಜೀವನಕ್ಕೆ ಸಂಬಂದಿಸಿದ್ದು ಎಂಬುದಾಗಿ ವಿಂಗಡಿಸಲಾಗಿದೆ.

ತ್ರಿವೇಣಿಯವರು ಮನಶ್ಯಾಸ್ತ್ರದ ಪದವೀಧರೆಯಾಗಿದ್ದ ಕಾರಣ ಕಥಾವಸ್ತುವಿನಲ್ಲಿ ಮನಶ್ಯಾಸ್ತ್ರಕ್ಕೆ ಸಂಬಂಧಿಸಿದ ವಿಚಾರಗಳು ತಲೆಹಾಕುವ ಅಂಶ ತೀರಸಹಜವಾಗಿದೆ. ಮತ್ತು ಸಮಾಜಿಕ ವಸ್ತುಗಳನ್ನು ಕುರಿತ ಕಥೆಗಳನ್ನು ರಚಿಸಿದ್ದಾರೆ. ಇವರ ನಲವತ್ತೊಂದು ಕತೆಗಳ ಪೈಕಿ ಹೆಂಡತಿಯ ಹೆಸರು, ಚಂಪಿ, ಅತಿಥಿ ಬರಲಿಲ್ಲ, ಸಮಸ್ಯೆಯ ಮಗು, ಮೂರನೆಯ ಕಣ್ಣು, ಎಂಟು ಗಂಟೆ, ಸಲಹೆ, ಎರಡು ಮನಸ್ಸು, ಕೊನೆಯ ದಿನ. ಮುಂತಾದ ಕಥೆಗಳನ್ನು ಮನಶ್ಯಾಸ್ತ್ರಕ್ಕೆ ಸಂಬಂಧಿಸಿದ ಕಥೆಗಳೆಂದು ವರ್ಗೀಕರಿಸಬಹುದು.

೧೯೫೩ರಲ್ಲಿ ಬೆಳಕು ಕಂಡ "ಹೆಂಡತಿಯ ಹೆಸರು" ತ್ರಿವೇಣಿಯವರ ಮೊದಲ ಕಥಾಸಂಕಲನ ಮನಶ್ಯಾಸ್ತ್ರದ ಹಿನ್ನೆಲೆಯಲ್ಲಿ ರಚನರಯಾದ ಈ ಕಥೆಯಲ್ಲಿ ಹೊಸದಾಹಿ ಮದುವೆಯಾದ ಈಶ್ವರಮೂರ್ತಿಯು ಹೆಂಡತಿಗೆ ಪತ್ರ ಬರೆಯಲು ಕುಳಿತರೆ ಸಾಕು ಅವನಿಗೆ ಹೆಂಡತಿಯ ಹೆಸರೇ ಮರೆತು ಹೋಗುತ್ತಿತ್ತು ಎಷ್ಟೇ ನೆನಪು ಮಾಡಿಕೊಂಡರೂ ಬರುತ್ತಿರಲಿಲ್ಲ ಸಾಧಾರಣ ಕಥೆಯಂತೆ ಓದುಗನು ಇದನ್ನು ನೋಡಿದರೆ ಹಾಸ್ಯಸ್ಪದವಾಗುತ್ತದೆ.ಮನಶ್ಯಾಸ್ತ್ರೀಯವಾಗಿ ನೋಡಿದರೆ ಈಶ್ವರಮೂರ್ತಿಯವರು ಕಾಲೇಜಿನ ವ್ಯಾಸಂಗದಲ್ಲಿದ್ದಾಗ ಚಂಚಲ ಮನಸ್ಸಿನ ತರುಣಿಯೊಬ್ಬಳಿಂದ ಪ್ರೇಮದಲ್ಲಿ ಸಿಲುಕಿ ಮೋಸಗೊಳಗಾಗಿರುತ್ತಾರೆ ಇದರಿಂದ ಅಘಾತಕ್ಕೊಳಗಾದ ಅವರ ಮನಸ್ಸು ಇದರಿಂದ ಹೊರಬರಲು ಅವಳ ಹೆಸರನ್ನೇ ಮರೆಯ ಬೇಕೆಂದು ನೀರ್ಧರಿಸುತ್ತಾರೆ. ಆದರೆ ಹೆಂಡತಿಯ ಹೆಸರನ್ನು ಮರೆಯಲು ಈ ವಿಚಾರಕ್ಕೂ ಸಂಬಂಧವೇನು ಎಂದು ಯೋಚಿಸಬಹುದು? ಮರೆಯ ಬೇಕಿದ್ದ ತನ್ನ ಪ್ರೇಯಸಿಯ ಹೆಸರು ತನ್ನ ಹೆಂಡತಿಯ ಹೆಸರು ಒಂದೇಯಾಗಿದ್ದರಿಂದ ಹೆಂಡತಿಯ ಹೆಸರು ಅವರ ನೆನಪಿನಲ್ಲಿ ಉಳಿಯುತ್ತಿರಲಿಲ್ಲ, 'ತನಗೆ ಬೇಡವಾದ ವಿಚಾರವನ್ನು ಮನಸ್ಸು ಸಂಪೂರ್ಣವಾಗಿ ಮರೆತು ಬಿಡುತ್ತದೆ' ಇದು ಮನಶ್ಯಾಸ್ತ್ರೀಯ ಅಂಶವೂ ಕೂಡ. ಈ ಮರೆವಿಗೆ ಪರಿಹಾರವಾಗಿ ತನ್ನ ತಾಯಿಯ ಸಲಹೆಯ ಮೇರೆಗೆ ತನ್ನ ಹೆಂಡತಿಯ ಹೆಸರನ್ನು ಬದಲಾಯಿಸುತ್ತಾನೆ. ಇಷ್ಟು ಹೆಂಡತಿಯ ಹೆಸರು ಕಥೆಯ ಸಾರ.

ಇವರ ಮತ್ತೊಂದು ಕಥೆ 'ಚಂಪಿ'ಯಲ್ಲಿ ಮೊದಲೆರೆಡು ಮಕ್ಕಳಲ್ಲಿ ಹೆಣ್ಣನ್ನೇ ಹೆತ್ತಿದ್ದ ಲಲಿತ ಮೂರನೆಯ ಸಲವೂ ಹೆಣ್ಣು ಮಗುವಿಗೆ ಜನ್ಮ ನೀಡುತ್ತಾಳೆ, ದುರಾದೃಷ್ಟವಶಾತ್ ಆ ಮಗುವಿನ ಬಲಗೈ ಬೆಳೆದಿರುವುದಿಲ್ಲ. ಮನೆಯವರು ಕೂಡ ತಮ್ಮ ಅಪೇಕ್ಷೆಗೆ ವಿರುದ್ಧವಾದ ಈ ಮಗುವಿನಿಂದ ವ್ಯಥೆಗೀಡಾಗಿರುತ್ತಾರೆ. ತಾಯಿ ಲಲಿತ ಅಮಘವಿಕಲ ಮಗುವನ್ನು ಜನರಿಗೆ

ತೋರಿಸಲು ಹಿಂಜರಿಯುತ್ತಿದ್ದಳು, ಇದನ್ನು ಗಮನಿಸುತ್ತಿದ್ದ ಇವಳ ಎರಡನೆ ಹೆಣ್ಣು ಮಗು ತನ್ನ ತಾಯಿಯಂತೆ ಆ ಮಗುವನ್ನು ಕಂಡಾಗ ಜನರೆದುರು ಪ್ರೀತಿಯಿಮದ ಕಾಣಲಿ ಹಿಂಜರಿಯುತ್ತೀರುತ್ತಾಳೆ ಇದರಿಂದ ಮನೆಯವರಿಂದ ನಿಷ್ಟುರಕ್ಕೆ ಒಳಗಾಗಿರುತ್ತಾಳೆ, ಆದರೆ ಮನೋವೈಜ್ಞಾನಿಕವಾಗಿ ಬಾಲ್ಯಾವಸ್ಥೆಯಲ್ಲಿನ ಮಗುವಿನ ಮನೆಯಲ್ಲಿಯ ಸದಸ್ಯರ ಮತ್ತು ಮನೆಯ ಸುತ್ತಣದ ವಾತವರಣದಲ್ಲಿಯ ಕೆಲವು ವರ್ತನೆಗಳು ಪ್ರಭಾವ ಬೀರುತ್ತವೆ. ಮನೆಯಲ್ಲಿ ಮಗುವಿನ ಮುಂದೆ ತಂದೆ ಧೂಮಪಾನ ಮಾಡಿದರೆ ಮಗುವು ಕೂಡ ಸಿಗರೇಟ್ ಪ್ಯಾಕ್ ಕಂಡಾಗ ಧೂಮಪಾನ ಮಾಡಲು ಹೋಗುವುದು, ತಾಯಿಯ ಬಟ್ಟೆಯನ್ನು ನೋಡಿದಾಗ ಅದನ್ನು ಧರಿಸಿ ತಾಯಿಯಂತೆ ವರ್ತಿಸುವುದು ಸಂತೋಷಿಸುವುದು. ಇವೆಲ್ಲಾ ಮನಶ್ಯಾಸ್ತ್ರೀಯ ಅಂಶಗಳು ಈ 'ಚಂಪಿ' ಕಥೆಯಲ್ಲಿ ವ್ಯಕ್ತವಾಗಿದೆ.

ಇವರ ಮತ್ತೊಂದು ಕಥೆ 'ಅತಿಥಿ ಬರಲಿಲ್ಲ' ಎಂಬ ಕಥೆಯಲ್ಲಿ ಪರಾನುಭವಕ್ಕಿಂತಲೂ ಸ್ವಅನುಭವವೆ ಹೆಚ್ಚು, ತ್ರಿವೇಣಿಯವರು ಹೆಣ್ಣಿನ ಮನೋಭಾವವನ್ನು 'ಪ್ರಸವ' ವೇದನೆ ಸನ್ನಿವೇಶದಲ್ಲಿ ಚಿತ್ರಿಸಿದ್ದಾರೆ. ಹೆರಿಗಾಗಿ ಆಸ್ಪತ್ರೆ ಸೇರಿದ ಕಾಮಾಕ್ಷಿ ದಿನ ತುಂಬುವ ಮೊದಲೇ ಪ್ರಸವ ವೇದನೆ ಪ್ರಾರಂಭವಾಗುತ್ತದೆ.'ಲೇಬರ್ ವಾರ್ಡಿನ' ರೋಗಿಯಾಗಿ ರಾತ್ರಿಯಲ್ಲಾ ನೋವನ್ನು ಅನುಭವಿಸಿದ ಕಾಮಾಕ್ಷಿ ಹೆಣ್ಣಿನ ಪಾಲಿಗೆ ಬಂದ ಈ ಅನಿವಾರ್ಯ ನೋವಿನ ಬಗ್ಗೆ ಜಿಗುಪ್ಸೆ ತಲೆದೊರುತ್ತದೆ. ಇದಕ್ಕೆ ಕಾರಣವಾಗುವ ಗಂಡಿನ ಬಗ್ಗೆ ಕ್ರೋಧ ಕೆರಳುತ್ತದೆ. ವಿವಹವನ್ನು ಮಾಡಿಸಿ ಇದಕ್ಕೆ ಪರೋಕ್ಷವಾಗಿ ಕಾರಣವಾದ ಪೋಷಕರ ಬಗೆಗೂ ಅಸಮಾಧಾನ ಕೋಪ ಕಿಡಿಕಾರುತ್ತದೆ. ಕ್ಷಣಕ್ಷಣಕ್ಕೂ ಕಾಮಾಕ್ಷಿಯ ಪ್ರಸವ ವೇಧನೆ ಹೆಚ್ಚಿದಂತೆಲ್ಲಾ ಇವಳ ಅಂತರಿಕ ತೊಳಲಾಟ ಅಧಿಕವಾಗುತ್ತದೆ, "ಇದೊಂದು ಸಲ ಕಳೆದರೆ ಸಾಕು, ಇನ್ನೊಂದು ಸಲ ಇಂತಹ ತಪ್ಪಿಗೆ ಅವಕಾಶ ಕೊಡುವುದಿಲ್ಲ ಈ ನರಕ ಯಾತನೆ ಅನುಭವಿಸಲಾರೆ" ಎಂದು ನಿರ್ಧರಿಸುತ್ತಾಳೆ ಹೆರಿಗೆಯಾಗಿ ನೋವು ಕಡಿಮೆಯಾಗುತ್ತ ಬಂದಾಗ ಅತಿಥಿ ಕೈತಪ್ಪಿ ಹೋಗಿರುತ್ತಾನೆ.ಜೀವಂತ ಮಗುವಿಗೆ ಜನ್ಮ ಕೊಡಲಾಗದೆ ಹೋದ ತನ್ನ ಹೆಣ್ಣು ತನದ ಬಗ್ಗೆ ಜಿಗುಪ್ಸೆಗೊಂಡು ಮುಂದಾದರೂ ಜೀವಂತ ಮಗುವಿಗೆ ಜನ್ಮ ಕೋಡಲಡ ಬೇಕೆಂದು ಹಟ ಹುಟ್ಟುತ್ತದೆ. ಮುಂದೆ ಬರಲಿರುವ ಅತಿಥಿಗಾಗಿಯಾದರೂ ನಾನು ಬೇಗ ಚೇತರಿಸಿಕೊಳ್ಳ ಬೇಕೆಂಬ ಆಕಾಂಕ್ಷೆ ಕಾಮಾಕ್ಷಿಯಲ್ಲಿ ತಲೆದೋರುತ್ತದೆ. ಸ್ವಲ್ಪ ಸಮಯದ ಹಿಂದೆ ಪ್ರಸವ ವೇದನೆಯಿಂದ ಜಿಗುಪ್ಸೆಹೊಂದಿ ಅವಳು ಹೊಂದಿದ್ದ ನಿರ್ಧಾರ ಒಮ್ಮೆಗೇ ಬದಲಾಗುತ್ತದೆ.

೧೯೬೦ರಲ್ಲಿ ಇವರ ಎರಡನೆಯ ಕಥಾಸಂಕಲನ 'ಎರಡು ಮನಸ್ಸು' ಬೆಳಕು ಕಾಣುತ್ತದೆ. ಹನ್ನೆರಡು ಕಥೆಗಳನ್ನು ಒಳಗೊಂಡಿರುವ ಈ ಕಥಾಸಂಕಲನದಲ್ಲಿ 'ಎಂಟು ಗಂಟೆ' ಎಂಬ ಕಥೆಯಲ್ಲಿ ಯೌವ್ವನದ ಹೊಸ್ತಿಲಿಗೆ ಪ್ರವೇಶಿಸುವ ಹೆಣ್ಣಿನ ಅಂತರ್ಯವು ಬಹಳ ಸೂಕ್ಷ್ಮವಾಗಿರುತ್ತದೆ. ಬಾಲ್ಯದಲ್ಲಿ ಎಂದೋ ಘಟಿಸಿದ್ದ ಭಯಾನಕ ಘಟನೆಯ ಭೀತಿಯು ಒಮ್ಮಲೆ ನೆನಪಿಗೆ ಬಂದು ಆಕೆಯ ಮನೋಸ್ಥೈರ್ಯನ್ನು ಕುಂದಿಸುತ್ತದೆ ಎಂಬುದು ಈ ಕಥೆಯ ಸುತ್ತ ಬೆಳೆದ ವಿಚಾರ. ಸೂಕ್ಷ್ಮ ಪ್ರಕೃತಿಯ ಹೆಣ್ಣಿನ ಕಥಾವಸ್ತುವನ್ನು ಒಳಗೊಂಡ 'ಸಲಹೆ' ಕಥೆ, ದ್ವಂದ್ವಗಳ ಚಿತ್ರಣವಾದ 'ಎರಡು ಮನಸ್ಸು', ನಿರುತ್ಸಾಹ ನಿರಾಸಕ್ತಿಯ ಹೆಣ್ಣಿನ ಕಂತೆ 'ಕೊನೆಯ ದಿನ' ಇವೆಲ್ಲವೂ ಎರಡು ಮನಸ್ಸು ಕಥಾಸಂಕಲನದ ಕಥೆಗಳು.

ಮೂರನೆಯ ಕಥಾಸಂಕಲನವಾದ 'ಸಮಸ್ಯೆಯ ಮಗು' ೧೯೬೧ರಲ್ಲಿ ಬೆಳಕು ಕಂಡಿತು ಹದಿನೈದು ಕಥೆಗಳನ್ನೊಳಗೊಂಡಿರುವ ಈ ಸಂಕಲನಕ್ಕೆ 'ರಾಜ್ಯ ಸರ್ಕಾರ ಪ್ರಶಸ್ತಿ' ದೊರೆತಿದೆ. ನಾ ಮೆಚ್ಚಿದ ಹುಡುಗಿ, ಚಿನ್ನದ ಸರ, ಎರಡು ಜೀವ, ಅವನ ಆಯ್ಕೆ, ನನ್ನ ಗೊಂಬೆ, ಬಿಳಿಯ ಕಾಗೆ, ಅಳಿಲ ಸೇವೆ, ತುಂಬಿದ ಕೊಡ, ಮೂರು ಗಂಟೆಗಳೊಳಗೆ ಮಗಳ ಮನಸ್ಸು, ವಿಶ್ವ ವಿಜಯ, ನಂಬಲಿ ಮುಂತಾದ ಕತೆಗಳು ಸಹ ಮಾನಸಿಕ ಭಾವನೆಗಳ ಚಿತ್ರಣಗಳನ್ನು ಒಳಗೊಂಡಿದೆ,

ಸಮಾಜಿಕ ಕಥೆಗಳಾದ 'ಬೆಡ್ ನಂ.ಏಳು', ಚಿನ್ಮಯಿ, ಹಸಿರು ಪೀತಾಂಬರ, ತಾಯಿ, ಆ ಸಂಜೆ,ಕೊನೆಯ ನಿರ್ಧಾರ, ಸಾಕಿದ ಹಾವು, ಲೋಕದ ಬಾಯಿ, ಆಲಿ ಅನಿಲ್, ಬದುಕಿನ ಮಾರ್ಗದಲ್ಲಿ, ಕೆಸರಿನ ಕಮಲ ಪ್ರೇಮದ ಬೆಳಕು, ಮಗುವಿನ ಕರೆ, ಇಂದ ನಾಳೆ, ನಾಯಿ ಬಾಲ,ಭಾವಚಿತ್ರ ಮುಂತಾದ ಕಥೆಗಳಲ್ಲಿ ಸಮಾಜದ ಜೀವನವನ್ನು ವಸ್ತುವನ್ನಾಗಿಸಿ ಕೊಂದು ರಚನೆಯಾಗಿವೆ.

**ಕಾದಂಬರಿಗಾರ್ತಿಯಾಗಿ ತ್ರಿವೇಣಿ**

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಾಹಿತ್ಯದ ಎಲ್ಲಾ ಪ್ರಕಾರಗಳೊಡೆನೆ ಸ್ಪರ್ಧಿಸುವ ಸಾಮರ್ಥ್ಯವಿರುವುದು ಕಾದಂಬರಿಗೆ ಮಾತ್ರವೆಂದರೆ ಅತಿಶಯೋಕ್ತಿಯಲ್ಲ. ಸಣ್ಣಕತೆಗಳಿಂದ ಪ್ರಾರಂಭಗೊಂಡ ತ್ರಿವೇಣಿಯವರ ಸಾಹಿತ್ಯ ಕೃಷಿ ಕಾದಂಬರಿಗಳವರೆಗೂ ವಿಸ್ತರಿಸಿತು. ಇವರು ತಮ್ಮ ಅಲ್ಪ ಜೀವಿತದ ಅವಧಿಯಲ್ಲೆ ೨೧ ಕಾದಂಬರಿಗಳನ್ನು ರಚಿಸಿದ್ದಾರೆ. ಕಥಾವಸ್ತುವಿನ ದೃಷ್ಟಿಯಿಂದ ಇವುಗಳನ್ನು ವೀಕ್ಷಿಸಿದಾಗ ಸಾಮಾಜಿಕ ವಸ್ತುವನ್ನುಳ್ಳ ಕಾದಂಬರಿಗಳು, ಮನಶ್ಯಾಸ್ತ್ರೀಯ ವಸ್ತುವನ್ನುಳ್ಳ ಕಾದಂಬರಿಗಳೆಂದು ವರ್ಗೀಕರಿಸಬಹುದು, ಹೂವುಹಣ್ಣು, ಅಪಸ್ವರ, ಸೋತುಗೆದ್ದವಳು, ಕೀಲುಗೊಂಬೆ, ಮೊದಲಹೆಜ್ಜೆ, ಹೃದಯಗೀತ, ಅಪಜಯ, ಕಂಕಣ, ಮುಕ್ತಿ, ಬೆಳ್ಳಿಮೋಡ, ಅವಳಮನೆ, ತಾವರೆಕೊಳ, ವಸಂತಗಾನ, ಕಾಶೀಯಾತ್ರೆ, ಬಾನುಬೆಳಗಿತು, ಹಣ್ಣೆಲೆಚಿಗುರಿದಾಗ, ಅವಳಮಗಳು. ಇವುಗಳು ಸಾಮಾಜಿಕ ವಸ್ತುವನ್ನೂಳಗೊಂಡ ಕಾದಂಬರಿಗಳಾದರೆ, ಬೆಕ್ಕಿನ ಕಣ್ಣು, ದೂರದ ಬೆಟ್ಟ, ಮುಚ್ಚಿದ ಬಾಗಿಲು, ಶರಪಂಜರ. ಮನಶ್ಯಾಸ್ತ್ರೀಯ ವಸ್ತುವನ್ನೊಳಗೊಂಡ ಕಾದಂಬರಿಗಳಾಗಿವೆ. ಆದರೂ ಮೇಲ್ನೋಟಕ್ಕೆ ಎಲ್ಲಾ ಕಾದಂಬರಿಗಳಲ್ಲೂ ಪಾತ್ರಗಳ ಅಂತರಿಕ ತೊಳಲಾಟ, ಸನ್ನಿವೇಶಗಳು ಮನೋವೈಜ್ಞಾನಿಕ ಕಾದಂಬರಿಯ ಮನವರಿಕೆಯನ್ನೇ ಮೂಡಿಸುತ್ತವೆ.

೧೯೫೩ರಲ್ಲಿ ರಚಿತವಾದ ಇವರ ಮೊದಲ ಕಾದಂಬರಿ 'ಹೂವು ಹಣ್ಣು' ಇಪ್ಪತ್ತರ ಹದಿಹರಿಯದ ಸುಂದರಿ ರಮಾ ವೈದವ್ಯಕ್ಕೀಡಾದಗ ತನ್ನ ಏಕಮಾತ್ರ ಪುತ್ರಿ ಶೀಲಳೊಂದಿಗೆ ನೆಮ್ಮದಿಯಾಗಿ ಜೀವನ ಸಾಗಿಸಲು ಆಶಿಸುವ ಇವಳ ಆಕಾಂಕ್ಷೆಗೆ ಸಮಾಜದ ಕಾಮುಖ ಪುರುಷರ ದೃಷ್ಟಿ ಅಡ್ಡಮಾಡುತ್ತವೆ. ಬೇರೆ ಮಾರ್ಗವಿಲ್ಲದೆ ಅನಿವಾರ್ಯವಾಗಿ ವೇಶ್ಯಾಜೀವನವನ್ನೇ ಸಾಗಿಸ ಬೇಕಾಗುತ್ತದೆ. ಆದರೆ ತನ್ನ ಮಗಳು ಮಾತ್ರ ಈ ಕೆಟ್ಟ ಸಮಾಜದಿದಂದ ದೂರವಿರಬೇಕು, ನನ್ನಂತೆ ನನ್ನ ಮಗಳು ಆಗಬಾರದೆಂದು ತನ್ನಿಂದ ದೂರವಿರಿಸಿ ಬೆಳೆಸುತ್ತಾಳೆ ಎಳೆಯ ಪ್ರಾಯದ ಹೆಣ್ಣೊಬ್ಬಳು ಅನಾಥಳಾದರೆ ಅವಳು ಅನಿವಾರ್ಯವಾಗಿ ಅನೀತಿಯುತ ಜೀವನ ಸಾಗಿಸ ಬೇಕಾಗುವುದು ಎಂಬ ಅಂಶ ಹೂವುಹಣ್ಣು ಕಾದಂಬರಿ ವ್ಯಕ್ತ ಪಡಿಸುತ್ತದೆ.

ಚಿಕ್ಕಮಗಳೂರಿನ ಶ್ರೀಮಂತ ಕುಟುಂಬದಲ್ಲಿ 'ಬೆಳ್ಳಿಮೋಡ' ಎಸ್ಟೇಟಿನ ಮಾಲೀಕನ ಮಗಳಾಗಿ ಹುಟ್ಟಿದರೂ ಸ್ವಲ್ಪವೂ ಅಡಂಬರವಿಲ್ಲದ, ಅಹಂಕರವಿಲ್ಲದ ಸಾಧಾರಣ ರೂಪವತಿ ಇಂದಿರಾ, ವಿದ್ಯಾಭ್ಯಾಸಕ್ಕಾಗಿ ಸಹಾಯ ಕೇಳಲು ಬಂದ ಸುಂದರ ಯುವಕ ಮೋಹನನ ರೂಪಕ್ಕೆ ಇಂದಿರಾ ತಾಯಿ ಮೆಚ್ಚಿ ತನ್ನ ಮಗಳಿಗೆ ಸರಿಯಾದ ಜೋಡಿ ಎಂದು; ಮಗಳನ್ನು ಮೊಹನನೊಂದಿಗೆ ವಿವಾಕ್ಕೆ ಒಪ್ಪಿಸುತ್ತಾರೆ, ಆದರೆ ತಾನು ಮದುವೆಯಾಗುವ ಹುಡುಗಿಯ ವಿಷಯದಲ್ಲಿ ಮೋಹನ ಅಲೋಚನೆಯೆ ಬೇರೆಯಾಗಿತ್ತು ಸ್ಫುರದ್ರೂಪಿಯಾಗಿದ್ದ ಈತ ತಾನು ವಿವಾಹವಾಗುವವಳು ಅತಿ ಸುಂದರಿಯಾಗಿರ ಬೇಕೆಂಬ ಬಯಕೆಯಾಗಿತ್ತು. ಆದರೆ ಇಂದಿರಾ ಇವನ ಸೌಂದರ್ಯಕ್ಕೆ ಸಮಾನಾಗಿಲ್ಲ ಎಂಬ ವಿಷಯ ತಿಳಿದಿದ್ದರೂ ವಿವಾಹಕ್ಕೆ ಒಪ್ಪುತ್ತಾನೆ ಕಾರಣ ಇಂದಿರಾ ವಿವಾಹದಿಂದ ತನ್ನ ವಿದ್ಯಾಭ್ಯಾಸಕ್ಕೆ ಸಹಾಯವಾಗುವುದು ಮತ್ತು ಮುಂದೆ ಇಂದಿರಾ ತಂದೆಯ ನಂತರ ಆ ಎಸ್ಟೇಟಿಗೆ ವಾರಸುದಾರ ನಾನೇ ಆಗುತ್ತೇನೆ ಎಂಬ ದುರಾಲೋಚನೆಯಿಂದ ಒಪ್ಪಿ. ಮದುವೆಯ ನಿಶ್ಚಯದ ನಂತರ ವಿದೇಶಕ್ಕೆ ವಿದ್ಯಾಭ್ಯಾಸಕ್ಕಾಗಿ ಹೋಗುತ್ತಾನೆ ಗುಣ ಸೌಂದರ್ಯ ನೋಡದೆ ಅವರಲ್ಲಿ ಇರುವ ಆಸ್ತಿಗೆ ಆಸೆ ಪಟ್ಟ ಮೋಹನನ ಸುಳ್ಳಿಗೆ ಉಳಿಗಾಲವಿಲ್ಲ ಎಂಬಂತೆ ಇಂದಿರಾ ತಂದೆ ತಾಯಿಗೆ ಅನೇಕ ವರ್ಷಗಳ ನಂತರ ಗಂಡು ಮಗು ಜನಿಸುತ್ತದೆ, ವಾರಸುದಾರನ ಆಗಮನ ಅರಿತ ಮೋಹನ ತನ್ನ ಆಸೆ ಕೈಗೂಡುವುದಿಲ್ಲ ಎಂದು ಇಂದಿರಾಳನ್ನು ವಿವಾಹವಾಗಲು ನಿರಾಕರಿಸುತ್ತಾನೆ ಆದರೆ ಅವಳ ಒಳ್ಳೆಯ ಗುಣದ ಬಗ್ಗೆ ನಂತರ ತಿಳಿದ ಮೋಹನ ತನ್ನ ತಪ್ಪನ್ನು ತಿದ್ದಿಕೊಳ್ಳಲು ಅವಕಾಶ ಕೇಳುತ್ತಾನೆ ಆದರೆ ಕಾಲ ಮಿಂಚಿಹೋಗಿರುತ್ತದೆ ಇಂದಿರಾ ನಿರಾಕರಿಸುತ್ತಾಳೆ. ಮೋಹನನ್ನು ಅಗಲಲಿದ್ದ ಇಂದಿರೆಯು ತನ್ನ ಪಾಲಿನ ಬೆಳ್ಳಿಯಲ್ಲ ಕರಗಿ 'ಮೋಡ' ಮಾತ್ರ ಉಳಿದಿದೆ ಎಂದು ವಿಷಾದದಿಂದ ನಗುತ್ತಾಳೆ.

೧೯೫೩ರಲ್ಲಿ ಬೆಳಕು ಕಂಡ ಇವರ ಎರಡನೆಯ ಕೃತಿ 'ಅಪಸ್ವರ' ಅಕಾಲ ಮೃತ್ಯುವಿಗೆ ತುತ್ತಾದ ದಂಪತಿಗಳ ಏಕಮಾತ್ರ ಪುತ್ರಿ ಮಿರಾಳು ತಬ್ಬಲಿಯಾದ ನಂತರ ತನ್ನ ದೊಡ್ಡಪ್ಪನೊಂದಿಗೆ ಮೈಸೂರು ಸೇರುತ್ತಾಳೆ. ಮೈಸೂರಿನಲ್ಲಿ ಗುಮಸ್ತೆಯಾಗಿದ್ದ ಕೃಷ್ಣಪ್ಪನವರಿಗೆ ನಾಲ್ಕು ಜನ ಗಂಡು ಮಕ್ಕಳು. ತನ್ನ ಮಕ್ಕಳನ್ನು ಸಾಕುವುದರಲ್ಲಿಯೇ ತೃಪ್ತಳಾಗಿದ್ದ ಕಮಲಮ್ಮನಿಗೆ ಮೀರಾಳ ಈ ಅನಿವಾರ್ಯ ಆಗಮನದಿಂದಾಗಿ ಅಸಮಾಧಾನ. ಆದರೂ ಗಂಡನ ಒತ್ತಾಯದಿಂದ ಮೀರಾಳ ಪೋಷಣೆಗೆ ಒಪ್ಪುತ್ತಾಳೆ. ಏಳು ವರ್ಷ ಪೂರ್ಣವಾಗಿ ತುಂಬದಿದ್ದ ಮೀರಾಳು ದೊಡ್ಡಪ್ಪನ ನಾಲ್ಕು ಜನ ಗಂಡು ಮಕ್ಕಳೊಂದಿಗೆ ಬೆಳೆಯುತ್ತಾಳೆ. ಅಣ್ಣಂದಿರ ಮತ್ತು ದೊಡ್ಡಪ್ಪನ ಅಭಿಮಾನವಿದ್ದರೂ ದೊಡ್ಡಮ್ಮನ ಪ್ರೀತಿ ಮಾತ್ರ ಮೀರಾಳಿಂದ ದೂರವಿರುತ್ತದೆ.

ಕೃಷ್ಣಪ್ಪನವರ ಮಗನಂತೆ ತಾನು ವೈದ್ಯಕೀಯ ವ್ಯಾಸಂಗ ಮಾಡಬೇಕೆಂಬ ಆಕಾಂಕ್ಷೆ ಮೂಡುತ್ತದೆ. ಅದರೆ ಇಂಟರ್ ಪರೀಕ್ಷೆ ಪ್ರಾರಂಭವಾಗುವ ಮುನ್ನವೇ ಶ್ರೀಮಂತ ಯುವಕ ಶಾಮುವಿನೊಡನೆ ಮದುವೆಯಾಗುತ್ತದೆ. ವಿವಾಹದ ನಂತರ ಹಳ್ಳಿ ಸೇರಿದ ಮೀರಾ ವಿದ್ಯಾವಂತನಲ್ಲದ ಗಂಡನ ಮೇಲೆ ಅಷ್ಟೇನು ಆಸಕ್ತಿಯಿಲ್ಲದ ಸಂಸಾರ, ಹಳ್ಳಿಯ ಜೀವನ ಒಗ್ಗುವುದಿಲ್ಲ ಇದರೊಡನೆ ವೀಣಾಳ ತಾಯಿಯಾಗುತ್ತಾಳೆ. ಇವಳ ಪಾಲಿಗಿದ್ದ ಒಂದೇ ಒಂದು ಆಸ್ತಿ ವೀಣಾ, ಐದನೇ ವಯಸ್ಸಿನಲ್ಲಿ ಮೃತ್ಯುವಶವಾಗುತ್ತಾಳೆ ಮತ್ತೊಮ್ಮೆ ಗರ್ಭಿಣಿಯಾಗುವ ಭಾಗ್ಯವನ್ನು ಕಳೆದುಕೊಂಡಿದ್ದ ಮೀರಾ ತನ್ನ ವ್ಯಾಸಂಗವನ್ನು ಮುಂದುವರಿಸುವ ಬಯಕೆಯನ್ನು

ಗಂಡನೊಡನೆ ವ್ಯಕ್ತಪಡಿಸುತ್ತಾಳೆ, ಅವಳ ಒತ್ತಾಯದೊಂದಿಗೆ ಶಾಮುವಿನ ಒಪ್ಪಿಗೆ ದೊರೆತು ಮೈಸೂರಿನಲ್ಲಿ ವೈದ್ಯಕೀಯ ವ್ಯಾಸಂಗ ಪ್ರಾರಂಭಿಸುತ್ತಾಳೆ. ಇಷ್ಟು 'ಅಪಸ್ವರ' ಕಾದಂಬರಿಯಾದರೆ. ಇದರ ಮುಂದಿನ ಭಾಗ 'ಅಪಜಯ' ಕಾದಂಬರಿ,

ತನ್ನಿಂದ ದೂರವಾದ ಶಾಮುವಿಗೆ ಹೆಣ್ಣೊಂದರ ಅವಶ್ಯಕತೆಯಿರುವುದನ್ನು ಅರಿತ ಮೀರಾ ಮದುವೆಯ ಪ್ರಾಸ್ತಾಪವನ್ನು ಶಾಮುವಿನ ಮುಂದೆ ಇಡುತ್ತಾಳೆ ಮೊದಲು ಒಪ್ಪದ ಶಾಮು ನಂತರ ತನ್ನ ಅಪಾರ ಆಸ್ತಿಯನ್ನು ಅನುಭವಿಸಲು ತನ್ನದೇ ಆದ ಒಂದು ಮಗು ಬೇಕೆಂಬ ಬಯಕೆಗೆ ಒಪ್ಪುತ್ತಾನೆ. ಶಾಮುವಿನ ಸೋದರತ್ತೆಯ ಮಗಳು ಸರಸಿಯೊಂದಿಗೆ ವಿವಾಹ ನೆರವೇರುತ್ತದೆ. ಶಾಮುವಿಗೆ ಮೀರಾಳ ಮೇಲಿರುವ ಪ್ರೀತಿ ಸರಸಿಯನ್ನು ಅಸೂಯೆಪಡುವಂತೆ ಮಾಡುತ್ತದೆ. ವೈದ್ಯಕೀಯ ವ್ಯಾಸಂಗ ಮುಗಿಸಿ ವೈದ್ಯಳಾಗಿ ಊರಿಗೆ ವಾಪಸ್ಸಾಗುತ್ತಾಳೆ. ಮೀರಾಳ ವೈದ್ಯೆ ವೃತ್ತಿಯು ಊರಿನಲ್ಲೆ ಪ್ರಾರಂಭವಾಗುತ್ತದೆ, ಆದರೆ ಆದಾಯಕ್ಕಿಂತ ಸ್ವಂತ ಹಣ ಹೆಚ್ಚು ಖರ್ಚಾಗುತ್ತಿರುತ್ತದೆ. ಇದುನ್ನು ಸಹಿಸದ ಸರಸಿ ನೇರವಾಗಿ ಪ್ರತಿಭಟಿಸುತ್ತಾಳೆ. ಜೀವನದ ಪ್ರಾರಂಭದಲ್ಲೇ ಅಪಸ್ವರವನ್ನು ಕಂಡಿದ್ದ ಮೀರಾಳು ಸವತಿಯೊಂದಿಗೆ ಸಹನೆಯಿಂದ ಸಂಸಾರಸಾಗಿಸುವ ಪ್ರಯತ್ನದಲ್ಲಿ ಅಪಜಯವನ್ನು ಅನುಭವಿಸುತ್ತಾಳೆ. ಸರಸಿಯ ಮನಸ್ಸು ಪ್ರಸನ್ನವಾಗಿ ಆ ಮೂಲಕ ಶಾಮುವು ನೆಮ್ಮದಿಯಿಂದಿರ ಬೇಕಾದರೆ ತಾನು ಮನೆಯನ್ನಯ ತೊರೆಯಲೇ ಬೇಕೆಂದು, ಈ ವಿಷಯವನ್ನು ಸೂಕ್ಷ್ಮವಾಗಿ ಶಾಮುವಿಗೆ ತಿಳಿಸಿ ತನ್ನ ಸ್ನೇಹಿತ ಮೈಸೂರಿನಲ್ಲಿ ಪ್ರಾರಂಭಿಸಿದ್ದ 'ವಿಜಯ ಫಾರ್ಮಸಿಗೆ' ಉದ್ಯೋಗಿಯಾಗಿ ಸೇರುತ್ತಾಳೆ. ಇಷ್ಟು 'ಅಪಜಯ' ಕಾದಂಬರಿಯ ಸಾರವಾಗಿದೆ.

ಇವರ ಮುಂದಿನ ಕಾದಂಬರಿ, 'ಸೋತು ಗೆದ್ದವಳು' ಮಧ್ಯಮ ವರ್ಗದ ಕುಟುಂಬದಲ್ಲಿ ಜನಿಸಿದ ಭಾರತಿ ವಿದ್ಯಾವಂತೆ ರೂಪವಂತೆ. ಅನುರೂಪನಾದ ಆನಂದನನ್ನು ವಿವಾಹವಾಗುತ್ತಾಳೆ. ಮದುವೆಯಾದ ತರುಣದಲ್ಲೇ ಆನಂದನು ತನ್ನ ಮುದ್ದಿನ ಮಡದಿ, ತಾಯಿ ಹಾಗೂ ತಂದೆಯನ್ನು ಅಗಲಿ ಎರಡು ವರ್ಷಗಳ ವಿಶೇಷ ವ್ಯಾಸಂಗಕ್ಕಾಗಿ ಲಂಡನ್ನಿಗೆ ಹೋಗುತ್ತಾನೆ. ಈ ಸಮಯದಲ್ಲಿ ಭಾರತಿಯ ಅತ್ತೆ ವೇದಮ್ಮನ ಕಿರಿಯ ಸೋದರ ಚಂದು ಅವರ ಮನೆಗೆ ಬರುತ್ತಾನೆ. ಇವರ ನಡುವೆ ಸ್ನೇಹ ಸಲಿಗೆ ಬೆಳೆಯುತ್ತದೆ. ಈ ಸಲಿಗೆ ಅವಳ ಸಹಜ ಯೌವ್ವನದ ಸುಪ್ತ ಚೇತನವನ್ನು ಬಡಿದೆಬ್ಬಿಸುತ್ತದೆ. ತನಗೆ ಇಷ್ಟವಿಲ್ಲದಿದ್ದರೂ ಚಂದುವಿನ ಬಯಕೆಯ ಕರೆಗೆ ಓಗೊಡುತ್ತಾಳೆ. ಮನಸ್ಸಿಗೆ ಬೇಡವಾದನ್ನು ಮೈ ಬಯಸುತ್ತದೆ. ಭಾರತಿ ಪತಿತಳಾಗುತ್ತಾಳೆ. ಇವಳಲ್ಲಿ ಪೂರ್ಣವಾಗಿ ಅನುರಕ್ತನಾಗಿದ್ದ ಚಂದುವು ಇವಳನ್ನು ತನ್ನೊಂದಿಗೇ ಬರಲು ಒತ್ತಾಯಿಸುತ್ತಾನೆ. ತನ್ನ ಕಲುಷಿತ ದೇಹವನ್ನು ಪುನಃ ಆನಂದನಿಗೆ ಒಪ್ಪಿಸಲು ಇಷ್ಟಪಡದ ಭಾರತಿ ಚಂದುವಿನ ಹಿಂದೆ ಹೋಗಲು ಸಮ್ಮತಿಸುತ್ತಾಳೆ. ಹೀಗೆ ನಾನು ಮಾಡುತ್ತೀರುವುದು ಸರಿಯೇ ಎಂಬ ಅಂತರಿಕ ತೊಳಲಾಟಕ್ಕೆ ಸಿಲುಕಿ ಪುನಃ ಮನಸ್ಸನ್ನು ಬದಲಿಸುತ್ತಾಳೆ. ಆದರೆ ಈ ವಿಚಾರ ಮನೆಯವರಿಗೆಲ್ಲರಿಗೂ ತಿಳಿದು ಇವಳನ್ನು ವ್ಯಭಿಚಾರಿಣಿ ದೃಷ್ಟಿಯಿಂದ ನೋಡುತ್ತಾರೆ. ಆದರೆ ಆನಂದನು ಹಿಂದಿರುಗವವರೆಗೂ ತಮ್ಮಲ್ಲಿಯೇ ಭಾರತಿಯನ್ನು ಉಳಿಯಲು ಒಪ್ಪಿಗೆ ಕೊಡುತ್ತಾರೆ. ಆನಂದ ಹಿಂದಿರುಗಿದಾಗ ಬೇರೆ ವಿವಾಹ ಮಾಡುವ ಸಿದ್ದತೆಯನ್ನು ತಂದೆ ತಾಯಿ ಮಾಡಿರುತ್ತಾರೆ. ಸ್ವದೇಶಕ್ಕೆ ಅಗಮಿಸಿದ ಆನಂದನಿಗೆ ಎಲ್ಲಾ ವಿಚಾರ ತಿಳಿಯುತ್ತದೆ, ತಾನು ಇಂಗ್ಲೇಂಡಿನಲ್ಲಿದ್ದಾಗ ತನ್ನ ದೈಹಿಕ ಬಯಕೆಯನ್ನು ತಡೆಹಿಡಿಯಲಾರದೆ ಅಲ್ಲಿನ ಹೆಂಗಸೊಬ್ಬಳೊಂದಿಗೆ ಸಂಪರ್ಕ ಬೆಳೆಸಿ ಬಂದಿದ್ದ ವಿಚಾರ ನೆನೆದು ತನ್ನಂತೆಯೇ ಭಾರತಿಯನ್ನು

ಮಾನವೀಯತೆಯ ದೃಷ್ಟಿಯಿಂದ ನೋಡಿ ಅವಳ ತಪ್ಪನ್ನು ಕ್ಷಮಿಸುತ್ತಾನೆ. ಜೀವನದಲ್ಲಿ ಆಕಸ್ಮಿಕವಾಗಿ ಎಡವಿ ಸೋಲನ್ನು ಅನುಭವಿಸಿದ್ದ ಭಾರತಿಯು ಆನಂದನ ಔದಾರ್ಯದ ಫಲವಾಗಿ ಪುನಃ ಗೆಲುವನ್ನನುಭವಿಸುತ್ತಾಳೆ. ೧೯೫೪ ರಲ್ಲಿ ಬೆಳಕು ಕಂಡಿರುವ 'ಸೋತುಗೆದ್ದವಳು' ಕಾದಂಬರಿಯ ಸಾರ.

ವಿದ್ಯಾವಂತ ತರುಣಿಯರು ಅವರ ಜೀವನದ ಬಗ್ಗೆ ಪರಿಸ್ಥಿತಿಗನುಗುಣವಾಗಿ ತಾಳುವ ಬೇರೆ ಬೇರೆ ನಿಲುವುಗಳನ್ನು ನಿರೂಪಿಸುವ ಒಂದು ಸಾಮಾಜಿಕ ಕೃತಿ 'ಕಂಕಣ' ಇದರ ಮುಂದುವರಿದ ಭಾಗ 'ಮುಕ್ತಿ' ಯಾಗಿ ಪ್ರಕಟವಾಗಿದೆ.

ಪ್ರೇಮವು ತಾವರೆಯ ಬೇರಿನಂತೆ ಅದರ ಬೇರಿಗೆ ಸಿಕ್ಕಿದ ಮನುಷ್ಯ ಅದರ ಗೋಜಿನಿಂದ ತಪ್ಪಿಸಿ ಕೊಳ್ಳಲು ಪ್ರಯತ್ನಿಸಿದಷ್ಟು ಬೇರು ಅವನನ್ನು ಮತ್ತಷ್ಟು ಬಂಧಿಸಿ ಕೆಸರಿನಾಳದೊಳಕ್ಕೆ ಒಯ್ಯುತ್ತದೆ.... ಎಂಬ ಸತ್ಯವನ್ನು 'ತಾವರೆಯ ಕೊಳ' ದ ಕಾದಂಬರಿಯಲ್ಲಿ ರಮೇಶ ಹಾಗೂ ರತ್ನಳ ಪೇಮ ಜೀವನವು ಸ್ಪಷ್ಟ ಪಡಿಸುತ್ತದೆ.

ತಾರುಣ್ಯಕ್ಕೆ ಕಾಲಿಟ್ಟ ಹೆಣ್ಣು ಗಂಡುಗಳ ಜೀವನ ಧೋರಣೆ ವೈವಾಹಿಕ ಜೀವನದ ಪ್ರಾರಂಭದಲ್ಲಿ ಯುವ ಜನಾಂಗದ ಮನೋಭಾವ, ಮಕ್ಕಳಿಲ್ಲದ ದಂಪತಿಗಳು , ಮಕ್ಕಳಿಗಾಗಿ ಹಂಬಲಿಸಿ, ಪ್ರಯತ್ನಿಸುವುದು ಮುಂತಾದವುಗಳನ್ನು , ಒಳಗೊಂಡ ಕಾದಂಬರಿ ಇವರ ೧೯ ನೇಯ ಕಾದಂಬರಿ 'ವಸಂತಗಾನ' ಅಂತರ್ಜಾತಿ ವಿವಾಹ, ವಿಧವಾವಿವಾಹ ಹಾಗೂ ತಲಾಂತರದ ಸನ್ನಿವೇಶದಲ್ಲಿ ಉಂಟಾಗುವ ವೈಪರಿತ್ಯಗಳ ಚಿತ್ರಣವನ್ನು ಕುರಿತು ರಚಿಸಿರುವ ಕೃತಿ 'ಹಣ್ಣೆಲೆ ಚಿಗುರಿದಾಗ'

'ಅವಳ ಮಗಳು' ಕಾದಂಬರಿಯು ೧೯೬೬ರಲ್ಲಿ ಪ್ರಕಟವಾಯಿತು. ಇದು ತ್ರಿವೇಣಿಯವರ ೨೧ನೇ ಕಾದಂಬರಿಯಾಗಿದ್ದು ತ್ರಿವೇಣಿಯವರು ಕಾಲವಾದಗ ಈ ಕಾದಂಬರಿ ಅಪೂರ್ಣವಾಗಿತ್ತು ಶ್ರೀಮತಿ ಎಂ.ಸಿ ಪದ್ಮರವರು ಪೂರ್ಣಗೊಳಿಸಿದರು.

ತ್ರಿವೇಣಿಯವರ ೨೧ ಕಾದಂಬರಿಗಳಲ್ಲಿ ಇದುವರೆಗೂ ಸಾಮಾಜಿಕ ಕಾದಂಬರಿಗಳ ಬಗೆಗೆ ಸ್ವಲ್ಪ ಮೆಲುಕು ಹಾಕಿದೆವು, ಇವರ ಮನೋವೈಜ್ಞಾನಿಕ ಕಾದಂಬರಿಗಳ ಬಗೆಗೆ ನಮ್ಮ ಮುಂದಿನ ಅಧ್ಯಾಯ ಸಾಗಲಿದೆ.

<u>ಅಡಿ ಟಿಪ್ಪಣಿ</u>

೧. ವಿಮಲಾ ಎನ್.ವಿ ತ್ರಿವೇಣಿ: ವ್ಯಕ್ತಿ ಮತ್ತು ಸಾಹಿತ್ಯ

೨. ಪಾರ್ವತಿ ಎಚ್.ಎಸ್. 'ತ್ರಿವೇಣಿ' ಓದಿನ ಒಳಗೆ. ೧೯೮೧

೩. ತ್ರಿವೇಣಿ(ಅನಸೂಯ ಶಂಕರ್) ಸಿ ಎನ್ ರಾಮಚಂದ್ರನ್, ಭಾರತೀಯ ಸಾಹಿತ್ಯ ನಿರ್ಮಾಪಕರು

ಅಧ್ಯಾಯ - ೪

## ಸಾಹಿತ್ಯ ಮತ್ತು ಮನೋವಿಜ್ಞಾನಕ್ಕಿರುವ ಸಂಬಂಧ

ಕನ್ನಡ ಸಾಹಿತ್ಯದಲ್ಲಿ ಮನೋವಿಜ್ಞಾನವನ್ನು ಬಳಸಿಕೊಂಡು ಅನೇಕ ಕೃತಿಗಳು ರಚನೆಯಾಗಿದೆ. ಮನೆಯ ಸುತ್ತಣ ಪರಿಸರ ಬಾಲ್ಯದಲ್ಲಾದ ಘಟನೆಗಳು, ವ್ಯಕ್ತಿಯಲ್ಲಿ ಬೀರುವ ಪ್ರಭಾವಗಳನ್ನು ಸಾಹಿತ್ಯದಲ್ಲಿ ಅಳವಡಿಸಿಕೊಳ್ಳುವಿಕೆ. ಮಾನವನ ಮನಸ್ಸಿನ ಅಧ್ಯಯನವೇ ಮನೋವಿಜ್ಞಾನ, ಮನುಷ್ಯನ ವರ್ತನೆಯಲ್ಲಾದ ಬದಲಾವಣೆಯ ಅಧ್ಯಯನವೇ ಮನೋವಿಜ್ಞಾನವೆಂದು ಸಾಮಾನ್ಯ ಅರ್ಥದಲ್ಲಿ ಕರೆಯಲಾಗುತ್ತದೆ. "ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಹೊರಬಂದಿರುವ ಬರಗೂರು ರಾಮಚಂದ್ರಪ್ಪರವರ ಕೃತಿಯಾದ "ಕನ್ನಡ ಸಾಹಿತ್ಯ ಮತ್ತು ಮನಶ್ಶಾಸ್ತ್ರ'ದಲ್ಲಿ ಟಿ ಪಿ ಅಶೋಕರವರು ಬರೆದಿರುವ ಲೇಖನದಲ್ಲಿ ಸಾಹಿತ್ಯ ಮತ್ತು ಮನೋವಿಜ್ಞಾನದ ಸಂಬಂಧವನ್ನು ಕುರಿತು ಕೆಲವೊಂದು ಪರಿಧಿಗಳೊಳಗೆ ಚರ್ಚೆ ನಡೆಸಿದ್ದಾರೆ, ರೆಸಿವೆಲೆಕ್ ಮತ್ತು ಆಸ್ಟಿನ್ ಮನೋವಿಜ್ಞಾನಿಗಳು ಕನ್ನಡ ಸಾಹಿತ್ಯ ಮತ್ತು ಮನೋವಿಜ್ಞಾನವನ್ನು ನಾಲ್ಕು ವಿವಿಧ ನೆಲೆಗಳಲ್ಲಿ ಚರ್ಚೆ ಮಾಡಿದ್ದಾರೆ. ಅವೆಂದರೆ

೧. ಲೇಖಕನನ್ನು ಕುರಿತ ಮನೋವೈಜ್ಞಾನಿಕ ಅಧ್ಯಯನ
೨. ಸೃಷ್ಟಿ ಪ್ರಕ್ರಿಯೆಯ ಅಧ್ಯಯನ
೩. ಸಾಹಿತ್ಯ ಕೃತಿಗಳಲ್ಲಿ ಕಂಡು ಬರುವ ಮನೋವೈಜ್ಞಾನಿಕ ಸಿದ್ಧಾಂತ ಮತ್ತು ಮಾದರಿಗಳ ಅಧ್ಯಯನ
೪. ಓದುಗರ ಮೇಲೆ ಸಾಹಿತ್ಯದ ಪರಿಣಾಮಗಳ ಅಧ್ಯಯನ

ಈ ನಾಲ್ಕು ಅಂಶಗಳ ನೆಲೆಯಲ್ಲಿ ಕನ್ನಡ ಸಾಹಿತ್ಯದ ಸ್ವರೂಪ ಭಿನ್ನವಾಗಿದೆ. ಈ ನಾಲ್ಕು ಅಂಶಗಳಲ್ಲಿ ನಮಗೆ "ಸಾಹಿತ್ಯ ಕೃತಿಗಳಲ್ಲಿ ಕಂಡು ಬರುವ ಮನೋವೈಜ್ಞಾನಿಕ ಸಿದ್ಧಾಂತ ಮತ್ತು ಮಾದರಿಗಳ ಅಧ್ಯಯನ" ಪ್ರಮುಖವಾದುದಾಗಿದೆ.

ಈ ನಾಲ್ಕು ಅಂಶಗಳ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯವನ್ನು ನೋಡಿದಾಗ ವಿಮರ್ಶೆಯ ಚಟುವಟಿಕೆಯ ಸ್ವರೂಪ ತುಂಬಾ ಭಿನ್ನವಾಗಿವೆ, ಮನೋವಿಜ್ಞಾನ ಪ್ರಧಾನಧಾರೆಯ ವಿಮರ್ಶಕ ಚಟುವಟಿಕೆಗಳಿಗೆ ಸ್ವಲ್ಪ ದೂರದಲ್ಲಿಯೆ ಉಳಿದಿದೆ.

ಕನ್ನಡ ಸಾಹಿತ್ಯದ ಸೃಜನಶೀಲ ಬರವಣಿಗೆಯಲ್ಲಿ ಮನಶ್ಶಾಸ್ತ್ರದ ನೆರಳು ಇಲ್ಲವೇ ಇಲ್ಲವೆನ್ನುವಷ್ಟು ಕ್ಷೀಣವಾಗಿವೆ. ಕೆಲವೇ ಬರಹಗಾರರು ತಮ್ಮ ಕೃತಿಗಳಲ್ಲಿ ಮನಶ್ಶಾಸ್ತ್ರವನ್ನು ಬಳಸಿಕೊಂಡಿದ್ದಾರೆ, ತ್ರಿವೇಣಿಯವರ 'ಬೆಕ್ಕಿನಕಣ್ಣು', 'ಶರಪಂಜರ' ಕಾದಂಬರಿಗಳಲ್ಲಿ ಜಿ.ಬಿ.ಜೋಶಿಯವರ- 'ಜಡಭರತನ ಕನಸುಗಳು', ಯಶವಂತಚಿತ್ತಾಲರ 'ಶಿಕಾರಿ', ಕಾರಂತರ ಕೆಲವು ಕಾದಂಬರಿಗಳಲ್ಲಿ ಹಾಗೂ ರಾಮಚಂದ್ರಶರ್ಮರ ಕೆಲವು ಕವನಗಳನ್ನು ಹೀಗೆ ಕೆಲವೇ ಕೃತಿಗಳಲ್ಲಿ ಮನಶ್ಶಾಸ್ತ್ರದ ಗಾಳಿ ಸುಳಿದಿರುವುದನ್ನು ನೋಡಬಹುದು, ಈ ಕೃತಿಗಳಲ್ಲಿ ಮನೋವಿಜ್ಞಾನದ ಸಂಬಂಧವನ್ನು ಕಲ್ಪಿಸಿ ಚರ್ಚಿಸಿರುವ ಉದಾಹರಣೆಗಳನ್ನು ಬಿಟ್ಟರೆ ಕನ್ನಡ ಸಾಹಿತ್ಯ ಮತ್ತು ಮನಶ್ಶಾಸ್ತ್ರದ ಸಂಬಂಧ ಅಷ್ಟೇನೂ ನಿಕಟವಾಗಿರುವಂತೆ ಕಂಡುಬರುವುದಿಲ್ಲ. ಹಳೆಗನ್ನಡ ಸಾಹಿತ್ಯ

ಸಂದರ್ಭದಲ್ಲಿ ಮನಶ್ಯಾಸ್ತ್ರದ ಮಾತುಗಳನ್ನು ಜೋಡಿಸಿರುವುದು ಜನ್ನನ 'ಯಶೋಧರ ಚರಿತೆಯ' ಸಂಧರ್ಭಲ್ಲಿಯೇ ಎಂಬುದು ತಿಳಿಯುತ್ತದೆ.

ಕನ್ನಡದ ಈ ಬರಹಗಾರರಲ್ಲಿ 'ಫ್ರಾಯ್ಡ್‌ವಾದಿ' ಅಥವಾ 'ಯೂಂಗ್‌ವಾದಿ' ಎಂದು ಕರೆಯುವಷ್ಟು ಪ್ರಭಾವಿ ಬರಗಾರರಿಲ್ಲದ ಕಾರಣ ಮನಶ್ಯಾಸ್ತ್ರೀಯ ಹಿನ್ನಲೆಯಲ್ಲಿ ಒಂದೆರಡು ಕತೆ ಕಾದಂಬರಿ ಕವನಗಳು ಕೆಲವು ವಿಮರ್ಶೆಯ ಲೇಖನಗಳನ್ನು ಬರೆದಿರುವುದನ್ನೇ ಬಿಟ್ಟರೆ ಈ ಎಲ್ಲಾ ಪ್ರಯತ್ನಗಳು ಮನೋವಿಜ್ಞಾನದ ತಿಳುವಳಿಕೆಯ ದೃಷ್ಟಿಯಿಂದ ರಚಿತವಾಗಿದೆ. ಕೇವಲ ಅಕಾಡೆಮಿಕ್ ಕುತೂಹಲದಿಂದ ಕೂಡಿದವು ಎಂಬುದನ್ನು ಗೋಚರಿಸುತ್ತವೆ. ಮನೋವಿಜ್ಞಾನದ ಅಳವಡಿಕೆ ಸಾಹಿತ್ಯದಲ್ಲಿ ಕಡಿಮೆ ಇರುವುದನ್ನೇ ನೋಡಿದರೆ. ಕನ್ನಡ ವಿಮರ್ಶೆ ಮನೋವಿಜ್ಞಾನದ ಉಪಯೋಗಗಳನ್ನು ತುಸು ಅನುಮಾನದಿಂದಲೇ ನೋಡಿದೆ. ಯಾರೇ ಆಗಲಿ ಸ್ವತಹ ಆಸಕ್ತಿಯ ಕೇಂದ್ರವಾಗಿ ಮನಶ್ಯಾಸ್ತ್ರವನ್ನು ಬಳಸಿಕೊಳ್ಳದೇ ಉತ್ಸಾಹ ಮತ್ತು ಸರಳ ಉದಾರವಾದೀ ನೆಲೆಗಳಿಂದಲೇ ಮಾಡಿದ್ದಾರೆ.

ಡಾ.ಜಿ.ಎಸ್.ಶಿವರುದ್ರಪ್ಪನವರು 'ಮನಶ್ಯಾಸ್ತ್ರದ ಕೀಲಿಕೈ' ಎಂಬ ಲೇಖನದಲ್ಲಿ ಸಾಹಿತ್ಯ ಮನಶ್ಯಾಸ್ತ್ರಜ್ಞರಿಗೆ ವಿಪುಲವಾದ ಸಾಮಾಗ್ರಿಯನ್ನು ಒದಗಿಸುತ್ತದೆ. ಎಂಬ ಮಾತನ್ನು ಸ್ಪಷ್ಟಪಡಿಸಿ ವಿಮರ್ಶಕನಿಗೆ ಮನೋವಿಜ್ಞಾನದ ಪರಿಚಯದಿಂದ ಉಪಯೋಗ ಉಂಟೇ ಎನ್ನುವ ಪ್ರಶ್ನೆಯನ್ನು ಎತ್ತಿಕೊಂಡು ಉತ್ತರವಾಗಿ 'ಮನಶ್ಯಾಸ್ತ್ರದಿಂದ ವಿಮರ್ಶಕನಿಗೆ ವಿಶೇಷ ಪ್ರಯೋಜನ ಉಂಟು' ಎಂದು. ಮುಖ್ಯವಾಗಿ ಪಾತ್ರಗಳ ಒಳತುದಿಗಳನ್ನು ಅರ್ಥಮಾಡಿಕೊಳ್ಳಲು ವಿಮರ್ಶಕನಿಗೆ ಮನಶ್ಯಾಸ್ತ್ರ ನೆರವು ನೀಡಬಲ್ಲದು ಎಂಬ ಗೃಹೀತ ಶಿವರುದ್ರಪ್ಪನವರದು.

"ಮನಶ್ಯಾಸ್ತ್ರವನ್ನು ಓದದವನೂ ಕೂಡ ಪಾತ್ರಗಳ ಒಳ ತುಮುಲಗಳನ್ನು ಚಿತ್ರಿಸುತ್ತಾನೆ. ಅದು ತನ್ನ ಪ್ರತಿಭೆಯಿಂದ ಹಾಗೆಯೇ ಕವಿ ಲೋಕದ ವ್ಯಕ್ತಿಗಳ ಅವಸ್ಥೆಯನ್ನು ಚಿತ್ರಿಸುವ ಈ ಶಕ್ತಿ ಪ್ರತಿಭೆಯಿಂದ ಸಿದ್ಧವಾದದ್ದು ಆತನೇನೋ ಮನಶ್ಯಾಸ್ತ್ರವನ್ನು ಓದಿಕೊಂಡು ಮನುಷ್ಯ ಸ್ವಭಾವವನ್ನೇ ಚಿತ್ರಿಸುವುದಿಲ್ಲ ಎಂಬುದು ಶಿವರುದ್ರಪ್ಪನವರಾ ವಾದ ಅಂದರೆ ಪಾತ್ರ ಚಿತ್ರಣಕ್ಕೆ ಮನಶ್ಯಾಸ್ತ್ರದ ಅರಿವು ಇಲ್ಲ ಆದರೆ ಪಾತ್ರ ವಿಮರ್ಶೆಗೆ ಬೇಕಾಗುತ್ತದೆ. ಲೋಕದ ಗ್ರಹಿಕೆ ಪ್ರತಿಭೆಯಿಂದ ಸಾಧ್ಯವಾಗುವುದಾದರೆ ಕೃತಿಯ ಲೋಕದ ಗ್ರಹಿಕೆ ಪ್ರತಿಭೆಯಿಂದ ಸಾಧ್ಯವಾಗದೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ."[೧] ಅಥವಾ ಸಾಮಾನ್ಯಜ್ಞಾನದಿಂದ ರಚಿತವಾದ ಕೃತಿಯನ್ನೇ ವಿಮರ್ಶಕ ತನ್ನ ಸಾಮಾನ್ಯಜ್ಞಾನದಿಂದಲೇ ಸಮೀಪಿಸಬಹುದು ಕೃತಿಯೊಂದು ಮನೋವೈಜ್ಞಾನಿಕ ಪ್ರಮೇಯದ ಆಧಾರದ ಮೇಲೆ ಕಟ್ಟಲ್ಪಟ್ಟಿದ್ದಲ್ಲಿ ಅದರ ಜ್ಞಾನವು ವಿಮರ್ಶಕನಿಗೆ ಇರಬೇಕಾಗುತ್ತದೆ. ಪಾಶ್ಚಾತ್ಯ ಕವಿಕೃತಿಗಳಲ್ಲಿ ಕಂಡುಬರುವಂತೆ ನಮ್ಮ ಕಾವ್ಯಗಳಲ್ಲಿ ಪಾತ್ರಗಳ ಅಂತರಂಗ –ಬಹಿರಂಗ ಸಂಘರ್ಷ ಕಡಿಮೆ ಎನ್ನುವ ಅರ್ಥದ ಮಾತುಗಳನ್ನು ಶಿವರುದ್ರಪ್ಪನವರು ಈ ಲೇಖನದಲ್ಲಿ ಆಡಿದ್ದಾರೆ.

ಕನ್ನಡ ಕೃತಿಗಳನ್ನೇ ಮನೋವೈಜ್ಞಾನಿಕ ಹಿನ್ನಲೆಯಲ್ಲಿ ಅಭ್ಯಸಿಸುವ ಪ್ರಯತ್ನ ಅಷ್ಟಾಗಿ ಕಂಡುಬಂದಿಲ್ಲ. ಎಲ್ಲೆಲ್ಲೋ ಬೆರಳೆಣಿಕೆಯಷ್ಟು ಈ ದಿಕ್ಕಿನಲ್ಲಿ ಪ್ರಯತ್ನ ಮಾಡಿದ್ದಾರೆ. 'ಮರಳಿಮಣ್ಣಿಗೆ ' ಕಾದಂಬರಿಯನ್ನೇ ಕುರಿತು ಡಾ.ಬಿ.ಕುಪ್ಪುಸ್ವಾಮಿ ಅವರ ಲೇಖನ ಮತ್ತು

ಎಲ್.ಆರ್.ಹೆಗಡೆ ಅವರ ಜನ್ನನ 'ಅಮೃತಮತಿ' ಎಂಬ ಲೇಖನ ಲೈಂಗಿಕ ಮನಶ್ಶಾಸ್ತ್ರದ ವಿಕೃತ ಪಾತ್ರ ನಿರೂಪಣೆಯ ಅತ್ಯುತ್ತಮ ಉದಾಹರಣೆಯೆಂಬಂತೆ ಅಮೃತಮತಿ ಚಿತ್ರಿತವಾಗಿದ್ದಾಳೆ, "ಶೈಶವದಲ್ಲಿನ ಸನ್ನಿವೇಶಗಳಿಗೂ ಒಂದು ವ್ಯಕ್ತಿಯ ಶೀಲರಚನೆಗೂ" ಇರುವ ನಿಕಟ ಸಂಬಂಧವನ್ನೇ ಕಾರಂತರು ಎರಡು ವಿಧವಾಗಿ ತೋರಿಸಿಕೊಟ್ಟವರು.

"ಮಾನವ ಜೀವನದ ಜೀವಂತ ಪ್ರತಿನಿಧಿಯೆನಿಸಿರುವ ಸಾಹಿತ್ಯವನ್ನು ಒಂದು ಕಲೆ, ಮಾನವನ ಜೀವನದ ಅನೇಕ ಅಂತರಿಕ ರಹಸ್ಯಗಳನ್ನು ತಿಳಿಸುವ ಮನೋವಿಜ್ಞಾನವು ಒಂದು ಶಾಸ್ತ್ರ". ಜೀವನದ ವಿವಿಧ ಮುಖಗಳ ಸಮಗ್ರತೆಯನ್ನರಿತು ಆನಂದಿಸ ಬಯಸುವವರು ಸಾಹಿತ್ಯವನ್ನು ಅಭ್ಯಾಸ ಮಾಡುತ್ತಾರೆ. ಶಾಸ್ತ್ರಾಭ್ಯಾಸ ಮಾತ್ರದಿಂದಲೇ ಜೀವನ ಸಾಗಿಸುವ ಗುರಿಹೊತ್ತ ವ್ಯಕ್ತಿಗಳು ಮಾತ್ರ ಶಾಸ್ತ್ರವನ್ನೇ ಸಮಗ್ರವಾಗಿ ಅಭ್ಯಾಸಿಸಿ ತನ್ಮೂಲಕ ಸೃಷ್ಟಿ ವೈಚಿತ್ರಯದ ರಹಸ್ಯಗಳನ್ನರಿತು ಕುಶಾಗ್ರಮತಿಗಳಾಗುತ್ತಾರೆ.

ಕುಪ್ಪಸ್ವಾಮಿ ಮತ್ತು ಎಲ್.ಆರ್.ಹೆಗಡೆಯವರ ಅಭಿಪ್ರಾಯಗಳನ್ನು ನೋಡಿದಾಗ ಎದುರಾಗುವ ಮುಖ್ಯ ಪ್ರಶ್ನೆ ಮನಶ್ಶಾಸ್ತ್ರದ ತಿಳುವಳಿಕೆ ನಿಜಕ್ಕೂ ಇಲ್ಲಿ ಎಷ್ಟರ ಮಟ್ಟಿಗೆ ಸಾಹಿತ್ಯ ವಿಮರ್ಶೆಗೆ ಪ್ರಯೋಜನಕ್ಕೆ ಬಂದಿದೆ ಎನ್ನುವುದು. ಸ್ಥೂಲವಾಗಿ ಇದೇ ತೆರನಾದ ಅಭಿಪ್ರಾಯಗಳನ್ನೇ ಇತರೆ ಅನೇಕರು ವ್ಯಕ್ತಪಡಿಸಿದ್ದಾರೆ.

ಇದಕ್ಕೆ ಉತ್ತರವಾಗಿ ಕುವೆಂಪುರವರ ಮನಶ್ಶಾಸ್ತ್ರಕ್ಕೆ ಸಂಬಂದಿಸಿದ ಲೇಖನವನ್ನು ನೆನೆಯುವುದು ಯುಕ್ತವಾಗಿದೆ "ಯಶೋದರ ಚರಿತ್ರೆಯಲ್ಲಿ ಕಾಮವಿಕಾರ ನಿರೂಪಣೆಯ" ಉದ್ದೇಶ ಇಲ್ಲಿ 'ವೈಪರೀತ್ಯ ಮನಶ್ಶಾಸ್ತ್ರ'ಎಂಬ ನುಡಿಗಟ್ಟನ್ನು ಕುವೆಂಪು ಅವರೂ ಬಳಸಿದ್ದಾರೆ. ಮನಶ್ಶಾಸ್ತ್ರೀಯ ವಿಮರ್ಶೆಯಾಗಿರದೇ ಭಾರತೀಯ ಕಾವ್ಯ ಮೀಮಾಂಸೆಯ ಪ್ರಧಾನ ಭಿತ್ತಿಯಲ್ಲಿ ಕವಿದರ್ಶನ ಅವನ ಕಾವ್ಯದಲ್ಲಿ ಎಷ್ಟರ ಮಟ್ಟಿಗೆ ಪ್ರತಿಧ್ವನಿತವಾಗಿದೆ ಎಂಬುದನ್ನು ಕವಿಯ ದೃಷ್ಟಿಕೋನದಿಂದಲೇ ಪರಿಶೀಲಿಸುವ ಪ್ರಯತ್ನ ಅವರದು.

ಆಧುನಿಕ ಕನ್ನಡ ಲೇಖರಿಗೆ ಮನಶ್ಶಾಸ್ತ್ರದ ಪರಿಚಯ, ಇಲ್ಲದೇ ಇಲ್ಲ ಕುವೆಂಪು, ಬೇಂದ್ರೆ, ಶ್ರೀರಂಗ, ಕಾರಂತ, ಅನಕೃ, ತ.ರಾ.ಸು. ಮೊದಲಾದ ಲೇಖಕರೆಲ್ಲ ಫ್ರಾಯ್ಡ್ ಯೂಂಗ್ ಮುಂತಾದವರನ್ನು ಓದಿಕೊಂಡಿದ್ದವರೇ, ಆ ಸೂಚನೆಗಳು ಅವರ ಬರವಣಿಗೆಯಲ್ಲಿ ಅಲ್ಲಲ್ಲಿ ಗೋಚರಿಸುತ್ತವೆ. ಆದರೆ ಮನಶ್ಶಾಸ್ತ್ರದ ಪರಿಚಯವಿದ್ದ ಈ ಲೇಖಕರು ಮನಶ್ಶಾಸ್ತ್ರದ ಚೌಕಟ್ಟನ್ನು ತಮ್ಮ ಸೃಜನಶೀಲ ಇಲ್ಲವೇ ವಿಮರ್ಶಾತ್ಮಕ ಗ್ರಹಿಕೆಯ ಸಂಧರ್ಭದಲ್ಲಿ ಪ್ರಧಾನವಾಗಿ ಬಳಸಿಕೊಳ್ಳಲಿಲ್ಲ. ಮನಶ್ಶಾಸ್ತ್ರಜ್ಞರಾದ ಫ್ರಾಯ್ಡ್ ಮತ್ತು ಯೂಂಗ್ ಮತವನ್ನು ಫ್ಯಾಶನ್ನು ಎಂಬ ಮಾತಿನಲ್ಲಿ ಬಳಸಿದ್ದಾರೆ. ಆಧುನಿಕ ಶಿಕ್ಷಿತರಲ್ಲಿ ಕನಸೆಂದರೆ ಮನದ ಕಸವೆಂಬಂತೆ ಅದೊಂದು ಅರ್ಥವಿಹೀನ ಘಟನೆಯನ್ನುವ 'ಫ್ಯಾಶನ್ನು' ರೂಡಿಗೆ ಬಂದಿದೆ .

ಕನ್ನಡ ಸಾಹಿತ್ಯದಲ್ಲಿ ಹಲವಾರು ಮನೋವಿಜ್ಞಾನಕ್ಕೆ ಸಂಬಂಧಿಸಿದ ಕೃತಿಗಳು ರಚಿತವಾಗಿವೆ. ಇದರಿಂದ ತಿಳಿಯುವುದು ಕನ್ನಡದ ಮನಸ್ಸು ಹಲವು ಜ್ಞಾನ ಶಾಖೆಗಳಿಗೆ ತೆರೆದುಕೊಂಡಿದೆ ಮುಖ್ಯವಾಗಿ ಪಾಶ್ಚಿಮಾತ್ಯ ಜ್ಞಾನ ಜಗತ್ತಿನ ಹಲವು ಪ್ರಯೋಗಗಳನ್ನು

ಕುತೂಹಲದಿಂದ ಗಮನಿಸಿದೆ. ಆ ವಿಚಾರಗಳನ್ನು ಕನ್ನಡದಲ್ಲಿ ಅನುವಾದಿಸಿ, ಸಂಗ್ರಹಿಸಿ ಕೊಟ್ಟಿದೆ. ಅವುಗಳ ಬಗೆಗೆ ಅನುಮಾನಗಳನ್ನು ಇಟ್ಟುಕೊಂಡಿದೆ. ಶ್ರೀ ನಾರಾಯಣಶಾಸ್ತ್ರಿ ಎಂಬುವರು ಮೈಸೂರು ವಿಶ್ವವಿದ್ಯಾಲಯದ ಪ್ರಚಾರೋಪನ್ಯಾಸ ಮಾಲಿಕೆಯಲ್ಲಿ 'ಕನಸುಗಳು' ಎಂಬ ಪುಸ್ತಕವೊಂದನ್ನು ಪ್ರಕಟಿಸಿದ್ದರು. ಸಿ.ಪಿ.ಕೆ. ಅವರ ಸಾಹಿತ್ಯ ಮತ್ತು ಮನೋವಿಜ್ಞಾನ', ಯೂಂಗನ 'ಮನೋವಿಜ್ಞಾನ ಮತ್ತು ಸಾಹಿತ್ಯ' ಹಾಗೂ ಫ್ರಾಯ್ಡ್ ಮತ್ತು ಯೂಂಗ್' ಎಂಬ ಬರಹಗಳೂ ಹರ್ಬರ್ಟ್ ರೀಡ್‌ನ ಕವಿಯ ವ್ಯಕ್ತಿತ್ವ ಮತ್ತು ಜಿ.ಎನ್.ಎಂ.ಟೈಲರ್ ಅವರ 'ಸ್ಫೂರ್ತಿ ಮತ್ತು ಪ್ರತಿಭೆ' ಎಂ. ಬಸವಣ್ಣ ಅವರು 'ಯೂಂಗ್‌ನ ಮನೋವೈಜ್ಞಾನಿಕ ಸಿದ್ಧಾಂತ ಎಂಬ ಪುಸ್ತಕವೊಂದನ್ನು ಹೊರತಂದಿದ್ದಾರೆ. ಓ.ಎಲ್.ನಾಗಭೂಷಣಸ್ವಾಮಿ ಅವರ 'ಪ್ರಜ್ಞಾಪ್ರವಾಹ ತಂತ್ರ', ಕೆ.ಎಲ್.ಗೋಪಾಲಕೃಷ್ಣಯ್ಯ ಅವರ 'ಪುರಾಣ'. 'ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ, ಹೆಗಡೆ ಅವರ 'ಪುರಾಣ ವಿಜ್ಞಾನಗಳು. ಈ ಎಲ್ಲಾ ಕೃತಿ ಮತ್ತು ಲೇಖನಗಳಲ್ಲಿ ಕೆಲವೊಂದು ಪ್ರಾಥಮಿಕ ಮಾಹಿತಿಗಳನ್ನು ಕನ್ನಡದಲ್ಲಿ ಒದಗಿಸಿಕೊಡುತ್ತವೆ. ಆದರೆ ಕನ್ನಡದ ಯಾವ ಮುಖ್ಯ ಲೇಖಕರು 'ಮನೋವೈಜ್ಞಾನಿಕ ವಿಮರ್ಶೆ' ಎಂದು ಹೇಳಬಹುದಾದ ವಿಮರ್ಶೆಯನ್ನು ಬರೆದಿರುವಂತೆ ತೋರುವುದಿಲ್ಲ.

"ಕನ್ನಡ ಲೇಖಕರಿಗೆ ಒಂದು ಸ್ವತಂತ್ರ ಆತ್ಮವಿಶ್ವಾಸದ ನಿಲುವಿನಿಂದ ಹೊಸ ವಿಚಾರಗಳಿಗೆ ಸ್ಪಂದಿಸುವ ಪ್ರತಿಕ್ರಿಯಿಸುವ ಸಾಮರ್ಥ್ಯ ಬೆಳೆಯದಿದ್ದಲ್ಲಿ ನರಬೌದ್ಧಿಕ ಗುಲಾಮಗಿರಿಯನ್ನು ನಾವೇ ಆಹ್ವಾನಿಸಿದಂತಾಗುತ್ತದೆ. "ಕವಿ ವ್ಯಕ್ತಿಯ ಹಾಗೂ ಕವಿ ಕೃತಿಯ ಪರಿಶೀಲನೆಯಲ್ಲಿ ಮನಶ್ಶಾಸ್ತ್ರದಿಂದ ತಕ್ಕಷ್ಟು ಉಪಯೋಗವಾಗಿದೆ" ಎನ್ನುವ ಶಿವರುದ್ರಪ್ಪನವರೇ "ಮನಶ್ಶಾಸ್ತವೇನಿದ್ದರು ಎಂದು ಉಪಕರಣ ಮಾತ್ರ. ಕವಿಕಾವ್ಯದ ರಹಸ್ಯದ ಪರಿಶೀಲನೆಯಲ್ಲಿ ಅದು ಎಲ್ಲವನ್ನು ಗ್ರಹಿಸಿ ಬುದ್ಧಿಸಮ್ಮತವಾಗಿ ನಿರೂಪಿಸಬಲ್ಲದೆನ್ನುವ ನಂಬಿಕೆಯೇನೋ ಇಲ್ಲ "[5] ಎನ್ನುತ್ತಾರೆ.

ಗಿರಿಯವರು "ಮನೊವಿಜ್ಞಾನ ಮತ್ತು ಸಾಹಿತ್ಯ ಎಂಬ ಲೇಖನದಲ್ಲಿ ಎರಡು ಭಾಗಗಳಿದ್ದು ಮೊದಲ ಭಾಗದಲ್ಲಿ ಫ್ರಾಯ್ಡ್ ಮತ್ತು ಯೂಂಗ್‌ರ ಅಭಿಪ್ರಾಯಗಳನ್ನು ಸಂಗ್ರಹಿಸಿದ್ದಾರೆ, ಮೊದಲು ಯೂಂಗ್ ಮತ್ತು ಫ್ರಾಯ್ಡ್‌ರ ಅಭಿಪ್ರಾಯಗಳನ್ನು ಕೊಡಲು ಕಾರಣಗಳು ಎರಡು ಒಂದು ಗಿರಿ ಲೇಖನದ ಪ್ರಾರಂಭದಲ್ಲಿ ಹೇಳಿದಂತೆ "ಮೊದಲನೆಯದಾಗಿ, ಮನೋವಿಜ್ಞಾನ ಪರಿಮಿತಿಗಳಲ್ಲಿ ಸೃಷ್ಟ್ಯಾತ್ಮಕ ಬರಹಗಳ ಬಗ್ಗೆ ಬರೆದವರಲ್ಲಿ ಐತಿಹಾಸಿಕವಾಗಿ ಇವರು ಮೊದಲಿಗರು ಎರಡನೆಯದಾಗಿ ಸಾಹಿತಿಗಳಲ್ಲಿ ಮತ್ತು ಸಾಹಿತ್ಯಾಸಕ್ತರಲ್ಲಿ ಇವರ ವಿಚಾರಗಳೂ ಹೆಚ್ಚು ಪ್ರಚಾರದಲ್ಲಿದ್ದಂತೆ. ಮತ್ತು ಮನೋವಿಜ್ಞಾನವೆಂದರೆ ಫ್ರಾಯ್ಡ್ ಮತ್ತು ಯೂಂಗ್‌ರ ಬರಹಗಳೆಂಬ ಅಭಿಪ್ರಾಯದಂತೆ ತೋರುವುದು" ಹೊರತು ಇವರ ಬರಹಗಳು ಮನೋವಿಜ್ಞಾನದ ಪ್ರಾತಿನಿಧಿಕ ಎಂಬ ಕಾರಣದಿಂದ ಅಲ್ಲ, "ಯೂಂಗ್ ಮತ್ತು ಫ್ರಾಯ್ಡ್‌ರ ಕಲ್ಪನೆಗಳನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸುವಾಗ ಅವರು ಅಂತಹ ತೀರ್ಮಾನಗಳಿಗೆ ಹೇಗೆ ಬಂದರು ಎಂಬುದೇ" ಎಂದು ಹೇಳುತ್ತಾ ಅನುಮಾನಗಳನ್ನೆ ಸಿದ್ಧಾಂತಗಳೆಂದು ಮಂಡಿಸಿದರು.

ವಿಜ್ಞಾನ ಒಪ್ಪಿಕೊಂಡ ವಿಧಾನಗಳ ಪ್ರಾಕಾರ ತಮ್ಮ ಉತ್ತರಗಳನ್ನು ಪರೀಕ್ಷೆಗೆ ಒಳಪಡಿಸಲಿಲ್ಲ ಎಂಬ ಅಕ್ಷೇಪಣೆಗಳನ್ನು ವ್ಯಕ್ತಪಡಿಸುತ್ತಾರೆ. ಈ ಎಲ್ಲಾ ಟೀಕೆ ಟಿಪ್ಪಣೆಗಳನ್ನು ಗಮನಿಸಿದಾಗ

ತಿಳಿಯುವ ಒಂದು ವಿಚಾರ ಫ್ರಾಯ್ಡ್ ಮತ್ತು ಯೂಂಗ್ ಸಾಹಿತ್ಯ ಕ್ರಿಯೆಯನನ್ನು ವಸ್ತುನಿಷ್ಟವಾಗಿ ಅಭ್ಯಾಸಕ್ಕೆ ಒಂದು ಸಮಸ್ಯೆ ಎಂದು ಎತ್ತಿಕೊಳ್ಳಲಿಲ್ಲ, ಬದಲಾಗಿ ಮನೋರೋಗಿಗಳ ಚಿಕಿತ್ಸೆಯ ಅನುಭವದಲ್ಲಿ ತಾವು (ಮತ್ತೆ ತಮ್ಮದೇ ಆದ ವಿಧಾನದಲ್ಲಿ) ಕಟ್ಟಿದ ಕಲ್ಪನೆಗಳನ್ನು ಮನುಷ್ಯನ ಇತರ ಎಲ್ಲಾ ಚಟುವಟಿಕೆಗಳನ್ನು ಅನ್ವಯಿಸಿದರು.

**ಶ್ರೀ ಹೆಚ್.ಎಸ್.ರಾಘವೇಂದ್ರರಾವ್‌ರವರ ಅಭಿಪ್ರಾಯ**

ಅಂತರ್ಶಾಸ್ತ್ರೀಯ ವಿಮರ್ಶೆಯ ಬಗ್ಗೆ ತುಂಬಾ ಉತ್ಸಾಹದಿಂದ ಮಾತನಾಡುವ ಶ್ರೀ ಎಚ್.ಎಸ್.ರಾಘವೇಂದ್ರರಾವ್ ಅವರೂ "ಎಲ್ಲಾ ನೈಜ ಕಲಾಕೃತಿಗಳೂ ಅನುಭವದ ಮೂಲದ್ರವ್ಯದಿಂದ ಮೂಡುತ್ತೇವೆಯೇ ಹೊರತು ಮನೋವೈಜ್ಞಾನಿಕ ಸಿದ್ಧಾಂತಗಳ ಹಂದರದ ಮೇಲೆ ಕಟ್ಟಲ್ಪಟ್ಟ ಕಾಲ್ಪನಿಕ ಸನ್ನಿವೇಶಗಳಿಂದ ಅಲ್ಲ". ಅವರ ಪ್ರಕಾರ ಸಾಹಿತ್ಯ ವಿಮರ್ಶಕರಿಗೆ ಮನಶ್ಯಾಸ್ತ್ರ ನಿಜಕ್ಕೂ ಪ್ರಯೋಜನಕ್ಕೆ ಬರುವುದು ಹೇಗೆ ಎಂಬುದರ ಬಗ್ಗೆ ಅವರ ವಾದ "........ಸಾಹಿತಿಯೊಬ್ಬನ ಅನುಭವದ್ರವ್ಯವು ಯಾವುದೋ ಮನಶ್ಯಾಸ್ತ್ರೀಯ ಸಿದ್ಧಾಂತಕ್ಕೆ ಸಮಾನಾಂತರವಾಗಿದ್ದು ಅವನು ರಚಿಸಿರುವ ಕೃತಿಯ ಶಿಲ್ಪವನ್ನು ನಿರ್ಧರಿಸಲು ನೆರವಾಗಿದ್ದರೆ ಸಂಬಂಧಪಟ್ಟ ಸಿದ್ಧಾಂತದ ಅರಿವು ಈ ಕೃತಿಯ ವಿಶ್ಲೇಷಣೆ ಸಹಾಯಕವಾಗುತ್ತದೆ".

"ವಿಮರ್ಶಕ ಚರ್ಚೆಯಿಂದ ತಿಳಿದು ಬರುವ ಒಂದು ಮುಖ್ಯವಿಚಾರ ಸಾಹಿತ್ಯ ಕೃತಿಯೊಂದು ಯಾವುದೇ ಬಗೆಯ ವಿಶ್ಲೇಷಣೆಯು ತನ್ನನ್ನು ಪೂರ್ತಿಯಾಗಿ ಬಿಟ್ಟುಕೊಡುವುದಿಲ್ಲ, ವಿಮರ್ಶಾ ವಿಧಾನಗಳು ಬಗೆಬಗೆಯದಾಗಿರಬೇಕು ಎನ್ನುವುದಕ್ಕೆ ಇದೊಂದೇ ಕಾರಣ ಸಾಕು. ಆದರೆ ಎಲ್ಲ ವಿಮರ್ಶಕರಿಗೂ ಕೃತಿಯಲ್ಲಿ ಒಂದೇ ಸಮಾನ ಅಂಶ ಇಲ್ಲದೇ ಹೋದಲ್ಲಿ ಏರ್ಪಡುವ ಗೊಂದಲ ಅಷ್ಟಿಷ್ಟಲ್ಲ, ಶಾಂತಿನಾಥ ದೇಸಾಯಿ ರಾಘವೇಂದ್ರರಾವ್ ಶರ್ಮರ ಕಾವ್ಯದ ಮನೋವೈಜ್ಞಾನಿಕ ನೆಲೆಗಳನ್ನು ನಿರಾಕರಿಸುತ್ತಾರೆ.

ಮನಶ್ಯಾಸ್ತ್ರದ ಪರಿಕಲ್ಪನನೆಗಳನ್ನು ಬಳಸಿಕೊಂಡು ಕುರ್ತುಕೋಟಿಯವರು ಬರೆದಿರುವ ಅತ್ಯುತ್ತಮ ಲೇಖನವೆಂದರೆ ಜಢಭರತನ ಕನಸುಗಳ ಬಗ್ಗೆ ಬರೆದಿರುವುದು. "ಸಾಧ್ಯವಿದ್ದ ಮಟ್ಟಿಗೆ ಸ್ವಪ್ನ ವಿಜ್ಞಾನದ ನಿಯಮಗಳನ್ನೇ ಅನುಸರಿಸಿ ಕನಸುಗಳನ್ನು ವಿವರಿಸುವ ಪ್ರಯತ್ನ ನನ್ನದಾಗಿದೆ". ಎಂದು ಸ್ವತಃ ಕುರ್ತುಕೋಟಿಯವರೇ ಹೇಳಿಕೊಂಡಿದ್ದಾರೆ. ಕನಸಿನ ವಿಶ್ಲೇಷಣೆ ಕುರಿತು ಅವರು ಒಂದು ಮಹತ್ವದ ಮಾತು ಹೇಳುತ್ತಾರೆ.

"ಕನಸುಗಳು ಒಂದು ಅರ್ಥದ ಅಭಿವ್ಯಕ್ತಿಗಾಗಿ ಬೀಳುವುದಿಲ್ಲ, ಆದ್ದರಿಂದ ಒಂದು ಕಲಾಕೃತಿಯನ್ನೇ ಅರ್ಥೈಸುವ ರೀತಿಯಲ್ಲಿ ಕನಸುಗಳನ್ನು ಪುರಾಣಗಳನ್ನು ವಿವರಿಸಲು ಬರುವುದಿಲ್ಲ "ಕುರ್ತುಕೋಟಿಯವರು ಈ ಲೇಖನದಲ್ಲಿ ಮುಖ್ಯವಾಗಿ ಯೂಂಗ್‌ನ ಹಲವಾರು ಪರಿಕಲ್ಪನೆಗಳನ್ನು ಬಳಸಿಕೊಂಡಿದ್ದಾರೆ. ಜನಪ್ರಿಯ ಕಾದಂಬರಿಗಾರ ಎಸ್.ಎಲ್. ಭೈರಪ್ಪನವರು 'ಮೌಲ್ಯಾತ್ಮಕ ವಾಸ್ತವತೆ" ಎಂಬ ತಮ್ಮ ಒಂದು ಲೇಖನದಲ್ಲಿ ಹೇಳಿರುವ ಲೇಖನದಲ್ಲಿ ಹೇಳಿರುವ ಮಾತುಗಳನ್ನು ಅವಶ್ಯ ಗಮನಿಸ ಬೇಕು "ಭೌತಶಾಸ್ತ್ರ ಎಂಬುದು ಹೇಗೆ ಆಧುನಿಕ ಕಾಲದಲ್ಲಿ ಮಾತ್ರವೇ ಹುಟ್ಟಿದ ಹೊಸ ಶಾಸ್ತ್ರವಲ್ಲವೋ ಹಾಗೆಯೇ ಮನಃಶಾಸ್ತ್ರವೂ ಸಹ ಬರಿಯ ಹತ್ತೊಂಭತ್ತು ಇಪ್ಪತ್ತನೆಯ ಶತಮಾನಗಳಲ್ಲಿ ಯೂರೋಪಿನಲ್ಲಿ ಅವತರಿಸಿದ ಹೊಚ್ಚ ಹೊಸ

ವಿಜ್ಞಾನವಲ್ಲ. Pscyche+logic ಆತ್ಮ+ಶಾಸ್ತ್ರ ಎಂಬ ಅರ್ಥದಲ್ಲಿ ಅದು ಯೋರೋಪಿನ ನಾಗರೀಕತೆಯ ಉಗಮವಾದ ಗ್ರೀಸ್ ದೇಶದಲ್ಲಿಯೂ ಇತ್ತು. ಭಾರತದಲ್ಲಿ ಗ್ರೀಸ್ ಸಂಸ್ಕೃತಿಯು ಬೆಳೆಯುವ ಎರಡು ಸವಿರ ವರ್ಷಗಳಿಗೆ ಹಿಂದೆಯೇ ಈ Pscyche+logic ಬೆಳೆದಿತ್ತು, ಉಪನಿಷತ್ತಿನಲ್ಲಿ ಅಭ್ಯಸಿಸುವ ಜಾಗೃತಾವಸ್ಥೆ, ಸ್ವಪ್ನಾವಸ್ಥೆ, ಭ್ರಮಾವಸ್ಥೆಗಳ ತುಲನೆ, ಪಂಚಕೋಶಗಳ ವಿಂಗಡನೆ ಮನುಷ್ಯನ ಗುಣ ಸ್ವಭಾವಗಳ ವಿಶ್ಲೇಷಣೆ ಮೊದಲಾದವುಗಳಲ್ಲವೂ ಮನಶ್ಯಸ್ತ್ರದ ಸಮಸ್ಯೆಗಳೇ. ಭಾರತೀಯ ದರ್ಶನದ ಪ್ರತಿಯೊಂದು ಪಂಥವೂ ತನ್ನದೇ ಆದ ಮನಶ್ಶಾಸ್ತ್ರವನ್ನು ಬೆಳೆಸಿತು. ಅದು ಬೆಳೆಸಿದ ಮನಶ್ಶಾಸ್ತ್ರವು ಅದು ಹೇಳುವ ದರ್ಶನ ಸಿದ್ದಾಂತದ ಉಳಿದ ಎಲ್ಲ ವಿವರಗಳ ಅಂತಿಮ ಧ್ಯೆಯಕ್ಕೆ ಅನುಗುಣವಾಗಿರುತ್ತಿತ್ತು. ಎಂದರೆ ಈ ಮನಶ್ಶಾಸ್ತ್ರವು ತರ್ಕದ ಮತ್ತು ವಿಶ್ಲೇಷಣೆಯ ಮಟ್ಟದಲ್ಲಿ ಮೌಲ್ಯತ್ಮಕವಾಗಿರುತ್ತಿತ್ತು ಮನಶ್ಶಾಸ್ತ್ರವು ತರ್ಕದ ಮತ್ತು ವಿಶ್ಲೇಷಣೆಯ ಮಟ್ಟದಲ್ಲಿ ಮೌಲ್ಯತ್ಮಕವಾಗಿರುತ್ತಿತ್ತು."

ಯಾವ ಮನಶ್ಯಾಸ್ತ್ರಜ್ಞರ ತತ್ವಗಳನ್ನು ಸಿದ್ದಾಂತಗಳನ್ನ ವಿಮರ್ಶಿಸಬೇಕು ಎಂಬುದರಲ್ಲಿ ಲೇಖಕರಿಗೆ, ಅರಿವಿಲ್ಲದಂತಿದೆ. "ಫ್ರಾಯ್ಡ್‌ನ ಸಿದ್ಧಾಂತವನ್ನು ಮೌಲ್ಯ ಮೀಮಾಂಸೆಯು ವಿಮರ್ಶಿಸಬೇಕೋ ಅಥವಾ ಫ್ರಾಯ್ಡ್‌ನ ಸಿದ್ಧಾಂತವು ಮೌಲ್ಯ ಮೀಮಾಂಸೆಯ ಆಧಾರವಾಗಬೇಕೋ? ಅಥವಾ ಎರಡು ಪರಸ್ಪರಗಳ ಬೆಳಕಿನಲ್ಲಿ ತಮ್ಮನ್ನೇ ತಾವು ಮತ್ತೊಮ್ಮೆ ವಿಶ್ಲೇಷಿಸಿಕೊಳ್ಳಬೇಕೋ? ಸಾಹಿತ್ಯದಲ್ಲಿ ಮನಶ್ಶಾಸ್ತ್ರೀಯ ವಿಧಾನವನ್ನೇ ಅನುಸರಿಸುವ ಲೇಖಕರಿಗೆ ಈ ತೆರನಾದ ಪ್ರಶ್ನೆಗಳ ಅರಿವೂ ಇರುವಂತೆ ತೋರುವುದಿಲ್ಲ.

<u>ಅಡಿ ಟಿಪ್ಪಣಿ</u>

೧. "ಕನ್ನಡ ಸಾಹಿತ್ಯ ಮತ್ತು ಮನಶ್ಶಾಸ್ತ್ರ' ಸಂ.ಬರಗೂರು ರಾಮಚಂದ್ರಪ್ಪ
-ಕರ್ನಾಟಕ ಸಾಹಿತ್ಯ ಅಕಾಡೆಮಿ.

೨. ಟಿ.ಪಿ.ಅಶೋಕ-"ಕನ್ನಡ ಸಾಹಿತ್ಯ ಮತ್ತು ಮನಶ್ಶಾಸ್ತ್ರ' ಸಂ.ಬರಗೂರು ರಾಮಚಂದ್ರಪ್ಪ
-ಕರ್ನಾಟಕ ಸಾಹಿತ್ಯ ಅಕಾಡೆಮಿ

೩. ಪ್ರೋ. ಪಿ. ನಟರಾಜ್- ಸಾಹಿತ್ಯ ಮತ್ತು ಮನೋವಿಜ್ಞಾನ. ಮೈಸೂರು ಪ್ರಕಾಶನ

# ಅಧ್ಯಾಯ - ೫

## ತ್ರಿವೇಣಿಯವರ ಮನೋವೈಜ್ಞಾನಿಕ ಕಾದಂಬರಿಗಳ ವಿಶ್ಲೇಷಣೆ

### ಬೆಕ್ಕಿನ ಕಣ್ಣು

ತ್ರಿವೇಣಿಯವರು ರಚಿಸಿರುವ ಮೊದಲ ಮನೋವೈಜ್ಞಾನಿಕ ಕಾದಂಬರಿ 'ಬೆಕ್ಕಿನ ಕಣ್ಣು' ಹಾಗೂ ಇವರ ಒಟ್ಟು ಕಾದಂಬರಿಗಳಲ್ಲಿ 'ಬೆಕ್ಕಿನ ಕಣ್ಣು' ನಾಲ್ಕನೇ ಕಾದಂಬರಿ ೧೯೫೪ರ ರಲ್ಲಿ ಕಾದಂಬರಿ ಪ್ರಕಟವಾಯಿತು. ಬೆಂಗಳೂರಿನ ಮಾನಸಿಕ ಚಿಕಿತ್ಸಾಲಯದಲ್ಲಿ ವೈದ್ಯರಾಗಿದ್ದ ಡಾ.ವಾಸುದೇವ ರಾವ್ ಅವರ ಮಾರ್ಗದರ್ಶನ ಅವರಿಗೆ ದೊರಕಿತು. 'ಬೆಕ್ಕಿನ ಕಣ್ಣು' ಕಾದಂಬರಿಯ ಹಸ್ತಪ್ರತಿಯನ್ನು ಓದಿ ಅದಕ್ಕೆ ಮುನ್ನುಡಿಯನ್ನು ಬರೆದರಲ್ಲದೆ. ಮಾನಸಿಕ ಅಸ್ವಾಸ್ಥ್ಯಕ್ಕೆ ಸಂಬಂಧಿಸಿದ ಅನೇಕ ಅಂಶಗಳ ಬಗೆಗೆ ಮಾಹಿತಿಯನ್ನು ಕೂಡ ನೀಡಿದರು.

ಮಧ್ಯಮ ವರ್ಗದ ಮನೆತನದ ಜಗನ್ನಾಥ ರಾಜಮ್ಮ ದಂಪತಿಗಳ ಸುಂದರ ಸಂಸಾರದಲ್ಲಿ ಪ್ರೀತಿ ಪ್ರೇಮಕ್ಕೆ ಅಭಾವವಿಲ್ಲದೆ. ಸುಂದರವಾಗಿ ಸಾಗುತ್ತಿರುತ್ತದೆ ೫ ವರ್ಷವಾದರೂ ಒಂದು ಮಗುವಿನ ದನಿ ಕೇಳಿದೆ. ಮನೆ ಬರಿದಾಗಿರುತ್ತದೆ ರಾಜಮ್ಮ ತಾಯ್ತನಕ್ಕಾಗಿ ಹಂಬಲಿಸಿ ಅವಳ ಹೃದಯ ಮಳೆಗಾಲದಲ್ಲಿ ಉಕ್ಕಿ ಹರಿಯುವ ನದಿಯ ಪ್ರವಾಹದಂತೆ ಉಕ್ಕಿ ಹರಿಯುತ್ತಿತ್ತು. ಕಂದನಿಲ್ಲದ ರಾಜಮ್ಮನಿಗೆ ಆ ತಾಯ್ತನದ ಭಾರ ಹೊರುವುದು ಕಷ್ಟವಾಗಿತ್ತು ಇದಕ್ಕೆಲ್ಲಾ ಪರಿಹಾರದಂತೆ ಕುಸುಮ ಎಂಬ ಹೆಣ್ಣು ಮಗಳ ಜನನವಾಗುತ್ತದೆ. ರಾಜಮ್ಮ ತಾಯಿಯಾಗಿ ಹರ್ಷಿಸಿದಳು ಹೃದಯದಲ್ಲಿ ಅಡಗಿದ್ದ ಪ್ರೀತಿ,ಮಮತೆ ಕಟ್ಟೆಯನ್ನೊಡೆದು ನುಗ್ಗಿ ಬರುವ ಪ್ರವಾಹದಂತೆ ಹರಿಯಿತು. ಕುಸುಮ ತಾಯಿಯ ನಿಸ್ವಾರ್ಥ ಪ್ರೇಮ ಜಲದಲ್ಲಿ ತೊಯ್ದು ಹೋದಳು.

ಅಜ್ಜಿಯಿರುವ ಮನೆ ಮೊಮೊಕ್ಕಳಿಗೆ ಪ್ರೀತಿಯ ಸಾಗರದಂತೆ ಲಕ್ಷ್ಮಮ್ಮನವರು ಕುಸುಮಳ ಅಜ್ಜಿಯಾದ್ದರಿಂದ ಎಲ್ಲರಿಗಿಂತ ಹೆಚ್ಚು ಅಧಿಕಾರ ಪಡೆದಿದ್ದರು. ರಾಯರು ರಾಜಮ್ಮ ಮತ್ತು ಲಕ್ಷ್ಮಮ್ಮನವರ ಪ್ರೀತಿಯಲ್ಲಿ ಕುಸುಮ ಮುದ್ದಾಗಿ ಬೆಳೆದಳು ಅವಳು ನಕ್ಕರೆ ಬೆಳದಿಂಗಳು ಹರಿದಂತೆ ಎನ್ನುತ್ತಿದ್ದರು.

ಕುಸುಮ ಅಜ್ಜಿಯ ಕಣ್ಣು ಬೊಂಬೆಯಾಗಿದ್ದಳು ಒಂದು ಗಳಿಗೆ ಅತ್ತರೂ ಸಹ ಅವರಿಗೆ ಸಹಿಸದಾಗುತ್ತಿತ್ತು. ಮೂರು ತಿಂಗಳ ಎಳೆ ಮಗು ಯಾವಗಲಾದರೂ ಅತ್ತರೆ
'ರಾಜೂ ಮಗನ ಯಾಕೆ ಅಳಿಸುತ್ತೀಯ?
ಅವಳನ್ನು ಅಳಿಸಬೇಡ ಎಂದು ಅತಂಕ ಪಟಿಕೊಳ್ಳುತ್ತಿದ್ದರು. ಅತ್ತೆಯ ಆತಂಕ ಮುಜುಗರ ನೋಡಿ ರಜಮ್ಮನಿಗೆ ಒಂದೊಂದು ಸಲ ಕೋಪ ಬರುತ್ತಿತ್ತು.
'ಹೌದು ಅತ್ತೆ, ನಾನೇ ಮಗೂನ ಬೇಕಂತೆ ಜಿಗುಟಿ, ಹೊಡೆದು ಅಳಿಸ್ತೀನಿ ಅವಳತ್ತರೆ ನನಗೆ ಸಂತೋಷ ಎಂದು ಗೊಣಗುತ್ತಿದ್ದಳು, ರಾಜಮ್ಮ

ಲಕ್ಷ್ಮಮ್ಮ ನಕ್ಕು 'ಕೋಪ ಮಾಡಿಕೊಳ್ಳಬೇಡ ಕಣೇ ಕುಸುಮಾ. ನಮ್ಮ ಮನೆ ಲಕ್ಷ್ಮೀ ಅವಳು ಅತ್ತರೆ ನನಗೆ ಸಹಿಸೋಲ್ಲ' ಎನ್ನುತ್ತಿದ್ದರು.
ಹೀಗೆ ಅತೀ ಪ್ರೀತಿಯಿಂದ ಬೆಳೆದ ಕುಸುಮ ಎಲ್ಲಾರ ಹೃದಯದ ಒಡತಿಯಾಗಿದ್ದಳು.

'ಕುಸುಮ ಮಾತುಬರದ ಹೊಳಪುಗಣ್ಣಿನ, ಅರೆಗೂದಲಿನ ಪುಟ್ಟ ಕುಸುಮ ತಾಯಿ ತಂದೆ, ಅಜ್ಜಿಯ ಕಣ್ಮಣಿಯಾದಳು, ಅಕ್ಕರೆಯ ಸಕ್ಕರೆಯ ಬೊಂಬೆಯಂತೆ ಹಿರಿಯರ ಪಾಲಿಗಾದಳು'.
ಕುಸುಮ ಮುಗುಚಿಕೊಳ್ಳದೇ ನೆಲದ ಮೇಲೆ ಈಜದೆ ನಡೆಯುವ ಹುಡುಗಿಯಾದಳು. ನಡಿಗೆ ಬರುವವರೆಗೆ ಕುಸುಮ ನೆಲದ ಮೇಲಿರದೆ ಹಿರಿಯರ ಸೊಂಟದ ಮೇಲೆ ಕುಳಿತೇ ಕಾಲ ಕಳೆದಳು.
ನಡಿಗೆ ಕಲಿತು- ಸರಿಯಾಗಿ ನಡೆಯಲು ಬಾರದ ಕುಸುಮ ಎಡವರಿಸಿ ಮುಗ್ಗರಿಸಿ ಬಿದ್ದಾಗಲಂತೂ ಅಜ್ಜಿಯ ಗೋಳುಬೇಡ.
'ಮಗೂನ ಡಾಕ್ಟರಿಗೆ ತೋರಿಸಿ ಔಷಧಿ ಹಾಕಿಸಿಕೊಂಡು ಬರೋ, ಗಾಯವಾಗಿ ರಕ್ತ ಬಂದಿದೆ ಎಂದರು ಕಳವಳದಿಂದ ಮಗನಿಗೆ, ತಾಯಿಯ ಈ ಹುಚ್ಚು ಪ್ರೀತಿಗೆ ಅವರನ್ನು ಸಂತೈಸುವ ಸಲುವಾಗಿ ಆತ ಕುಸುಮಳನ್ನು ಎತ್ತಿಕೊಂಡು ಹತ್ತಿರದಲ್ಲಿಯೇ ಇದ್ದ ಷಾಪಿಗೆ ಹೋಗಲೇ ಬಾಕಯಿತು. ಆ ಚಿಕ್ಕಗಾಯವನ್ನು ನೋಡಿ ಡಾಕ್ಟರ್ ನಗುತ್ತಾ ಟಿಂಚರ್ ಆಯೋಡಿನ್ ಹಚ್ಚಿ ಕಳುಹಿಸಿದರೂ ಜಗನ್ನಾಥರಾಯರೂ ಬರುವುದು ತಡವಾದಗ ಲಕ್ಷ್ಮಮ್ಮ 'ಇಷ್ಟುಹೊತ್ತಾದರು ಯಾಕೆ ಬರಲಿಲ್ಲ'?
'ಏನಾದರೂ ಆಪರೇಷನ್ ಮಾಡಬೇಕೆಂದರೊಏನೋ'? ಎಂದು ಕಳವಳ ವ್ಯಕ್ತಪಡಿಸುತ್ತಿದ್ದರು.

ಅಪ್ಪುಮುದ್ದಿನಿಂದ ಕುಸುಮಳನ್ನು ಸಾಕುತ್ತಿದ್ದ ಲಕ್ಷ್ಮಮ್ಮ ಕುಸುಮಳ ಮೊದಲ ವರ್ಷದ ಹುಟ್ಟು ಹಬ್ಬವನ್ನು ಮನೆಯವರೆಲ್ಲರೂ ಒಂಟಿಗಾಲಿನಲ್ಲಿ ನಿಂತು ನಿರೀಕ್ಷಿಸತೊಡಗಿದರು. ರಾಮನವಮಿ, ಗೋಕುಲಾಷ್ಟಮಿಗಿಂತಲೂ ಕುಸುಮ ಜನ್ಮತಾಳಿದ ದಿನ ಅವರ ಭಾಗಕ್ಕೆ ಹೆಚ್ಚು ಮಹತ್ವ ಪೂರ್ಣವಾಗಿದ್ದಿತು, ಪುಣ್ಯದಿನವಾಗಿತ್ತು. ಲಕ್ಷ್ಮಮ್ಮನವರು ಮಗನಿಗೆ ಕುಸುಮಳ ಹುಟ್ಟುಹಬ್ಬಕ್ಕೆ ಅವಲಕ್ಕಿ ಸರವನ್ನು ಮಾಡಿಸು ಎಂದರು ಚಿನ್ನವಿಲ್ಲ ಸರಕ್ಕೆ ಎಂದಾಗ, ನನ್ನಾಸೆ ಕುಸುಮಳ ಕೊರಳಿಗೆ ಚಿನ್ನದಸರ ಹಾಕಬೇಕೆಂದು ಎಂದು ತನ್ನಲ್ಲಿದ್ದ ತನ್ನ ಪತಿಯ ಎರಡು ಉಂಗುರಗಳ ನೀಡಿ ಸರಮಾಡಿಸುವಂತೆ ಹೇಳುತ್ತಾಳೆ. ಅತಿ ಪ್ರೀತಿ ಔಧಾರ್ಯ ಮುದ್ಧಿನಿಂದ ಬೆಳೆದ ಕುಸುಮ ಎಲ್ಲರ ಹೃದಯ ಸಾಮ್ರಾಜ್ಞಿ ಆಗಿದ್ದಳು.

ಅಜ್ಜಿಯನ್ನು ತುಂಬಾ ಗೋಳಾಡುಸುತ್ತಿದ್ದ ಕುಸುಮ ಯಾವಾಗಲೂ ಅವರ ಬಳಿಯೇ ಹೋಗುತ್ತಿದ್ದಳು. ಇದನ್ನು ನೋಡಿ ಕೋಪಗೊಂಡ ರಾಜಮ್ಮ 'ಮುಪ್ಪಿನ ಮುದುಕಿಗೆ ಒಂದು ತುತ್ತು ಅನ್ನ ತಿನ್ನದ ಹಾಗೆ ಮಾಡ್ತಿಯಾ? ಬೆಳಗಿನಿಂದ ನನಗೂ ನಿನ್ನ ನೋಡಿ ನೋಡಿ ಸಾಕಗಿದೆ ಎಂದು ಹೇಳುತ್ತಾ ರಾಜಮ್ಮ ಎದ್ದು ಬಂದು ಕುಸುಮಳಿಗೆ ಒಂದು ಏಟು ಹಾಕಿದಳು'.

ಕುಸುಮ ತನ್ನ ಜೀವಮಾನದಲ್ಲಿ ತಂದ ಮೊದಲ ಪೆಟ್ಟದು ತಾಯಿ ತನ್ನನ್ನು ಹೊಡೆದೊಡನೆ ಕುಸುಮ ದೊಡ್ಡ ದನಿ ತೆಗೆದು ಅಳಲು ಮೊದಲು ಮಡಿದಳು. ಬೆನ್ನ ಮೇಲೆ ಬಿದ್ದ ಏಟಿನಿಂದ

ಅವಳಿಗೆ ನೋವಾಗದಿದ್ದರೂ ಆ ಏಟಿನಿಂದ ತನ್ನ ಅಭಿಮಾನ ಗೌರವ ಹಾಳಾಯಿತೆಂದೇ ಅವಳು ಭಾವಿಸಿದಳು. ನೋವಿಗಿಂತಲೂ ಏಟು ತಿಂದ ಅಪಮಾನ ಹೆಚ್ಚಿನದಾಗಿತ್ತು.

ಮುದ್ದಿನ ಮಗಳ ಕಣ್ಣುಗಳಲ್ಲಿ ಕಂಬನಿ ಪ್ರವಾಹ ಬಂದ ಕೂಡಲೇ ರಾಜಮ್ಮನ ಕೋಪ ಕರಗಿತು. ಮಗಳನ್ನು ಶಾಲೆಗೆ ಸೇರಿಸುವುದಕ್ಕಾಗಿ ಒಂದು ಶುಭದಿನವನ್ನು ಗೊತ್ತು ಮಾಡಿದರು. ಕುಸುಮ ಶಾಲೆಗೆ ಹೋಗುವುದಕ್ಕೆ ಒಂದು ವಾರದಿಂದಲೂ ಮುಂಚಿತವಾಗಿ ಮನೆಯವರೆಲ್ಲರೂ ಅವಳನ್ನು ಬಗೆ ಬಗೆಯಾಗಿ ರಮಿಸಿ ಸಿಹಿ ಮುತ್ತುಗಳನ್ನಾಡಿದರು. ತಂದೆ ಮಗಳನ್ನು ಮನ ಒಲಿಸಿ ಶಾಲೆಗೆ ಕಳುಹಿಸುವುದಕ್ಕಾಗಿ ಎರಡು ಸಿಲ್ಕಿನ ಲಂಗಗಳನ್ನು ಹೊಲೆಸಿ ತಂದರು. ಬಣ್ಣ ಬಣ್ಣದ ರಿಬ್ಬನ್‌ಗಳನ್ನು ತಾಯಿ ತಂದರು, ಅಜ್ಜಿಯ ವಿಭೂತಿ ಡಬ್ಬಿಯ ಪುಡಿಗಾಸೆಲ್ಲಾ ಮೊಮ್ಮಗಳ ಹಣ್ಣು, ಪೆಪ್ಪರ್ ಮೆಂಟಿಗಾಗಿ ಖರ್ಚಾಯಿತು.

ಕುಸುಮ ಶಾಲೆಗೆ ಹೊರಟ ದಿನ ಮನೆಯವರಿಗೆಲ್ಲ ಏನೋ ಒಂದು ಬಗೆಯ ಉತ್ಸಾಹ, ಉಲ್ಲಾಸ, ಆ ಮಹಾದಿನವನ್ನು ಮನೆಯವರಿಲ್ಲರೂ ಅತ್ಯಂತ ವೈಭವದಿಂದ ಆಚರಿಸಿದರು, ಸರಸ್ವತಿಗೆ ಹೋಳಿಗೆ ಪಾಯಸದ ನೈವೇದ್ಯವಾಯಿತು. ಇಷ್ಟು ಮುದ್ದಿನಿಂದ ಸಾಕಿದ ಕುಸುಮಳು ಶಾಲೆಯಲ್ಲಿ ಶಿಕ್ಷಕಿ ಒಂದು ಮಾತು ಬೈದರು ಎಂದು ಹೋಗಲ್ಲ ಎಂದರೆ ಅಜ್ಜಿ ಲಕ್ಷ್ಮಮ್ಮನವರು ಶಿಕ್ಷಕಿಯ ಮೇಲೆ ಕಿಡಿಕಾರಿದರು. ಅದು ಶಿಕ್ಷಕಿ ಬೈದದಾದ್ದರೂ ಏನೂ 'ಮತ್ತೆ ಮಾತನಾಡಬೇಡಮ್ಮ' ಎಂದು.

ಹೀಗೆ ಸಣ್ಣ ಅಪಮಾನ ಬೈಗಳ ಸಹಿಸದ ಕುಸುಮ ಶಾಲೆಯಲ್ಲಿ ಅಧಿಕಾರವನ್ನು ಚಲಾಯಿಸಲು ಪ್ರಯತ್ನಿಸಿದಳು ಆದರೆ ಕುಸುಮಳಷ್ಟೇ ತುಂಟಾಟದ ಆ ಹುಡುಗಿಯರು ತಮ್ಮ ವಯಸ್ಸಿನವಳೇ ಆದ ಕುಸುಮಳ ಮಾತಿಗೆ ಮನ್ನಣೇ ಕೊಡಲಿಲ್ಲ ಇಂಥ ಬಗೆಯ ವಿರೋಧ ಪ್ರತಿಭಟನೆ ಕುಸುಮಳಿಗೆ ತುಂಬಾಹೊಸದು ಮನೆಯಲ್ಲಿ ಯಾವ ವಿಧವಾದ ವಿರೋಧವನ್ನು ಕಾಣದ ಸ್ವೇಚ್ಛಾಚಾರಿ ಕುಸುಮ ಶಾಲೆಯಲ್ಲಿ ಒಂಟಿಯಾಗಿದ್ದಳು ಆದ್ದರಿಂದ ಕುಸುಮಳಿಗೆ ತಾನು ಹೇಳಿದಂತೆ ಕೇಳುವ ತನ್ನನ್ನು ಆದರಿಸುವ ಜೀವಿಯೊಂದರ ಅವಶ್ಯಕತೆಯಿತ್ತು. ಅದಕ್ಕಾಗಿ ಅವಳು ಪಾಲಿ ಎಂಬ ಬೆಕ್ಕನ್ನು ತನ್ನದಾಗಿಸಿಕೊಂಡಳು ಜೊತೆಗೆ ಜಿಮ್ಮಿ ಎಂಬ ನಾಯಿಯು ಕೂಡ ಇವಳ ಜೊತೆಗಾರನಾಯಿತು. ಅಜ್ಜಿಯ ಸಾವಿನಿಂದ ಮೊದಲ ಬಿರುಕು ಕಾಣಿಸಿಕೊಳ್ಳತ್ತದೆ. ಅಜ್ಜಿಯ ಸಾವಿನಿಂದ ಕುಸುಮ ಚೇತರಿಸಿಕೊಳ್ಳುವಷ್ಟರಲ್ಲಿ ಅವಳ ತಾಯಿಯು ಸಾಯುತ್ತಾಳೆ. ತಾಯಿಯ ಸ್ಥಾನವನ್ನು ತುಂಬಲು ಕುಸುಮಳ ತಂದೆ ತಮ್ಮ ಪ್ರೀತಿಯನ್ನು ಇಮ್ಮಡಿಗೊಳಿಸುತ್ತಾರೆ.

ಜಗನ್ನಾಥರಾಯರು ಮಗಳಿಗಾಗಿ ಮದುವೆಯಾಗುವುದಿಲ್ಲವೆಂದು ನಿರ್ಧರಿಸಿದ್ದರೂ ಉಳಿದ ಪೂರ್ವ ಜೀವನವನ್ನು ಒಂಟಿಯಾಗಿ ಕಳೆಯಲಾರೆನೂ ಎನ್ನಿಸಿ ಪದ್ಮ ಎಂಬ ಮಲತಾಯಿಯನ್ನೇ ಕುಸುಮಳಿಗೆ ತರುತ್ತಾರೆ.

ಎಸ್.ಎಸ್.ಎಲ್.ಸಿ ವರೆಗೂ ಓದಿದ್ದ ಪದ್ಮ ಯಾವ ತಾಪತ್ರಯವೂ ಇಲ್ಲದೆ ಸುಖವಾಗಿ ಬೆಳೆದ ಮೈ ಅವಳದು ಎತ್ತರವಾದ ನಿಲುವು ಅದಕ್ಕೆ ತಕ್ಕ ಗಾತ್ರ ಸುಂದರವಾದ ಮೈ ಬಣ್ಣ ಪದ್ಮಳಿಗೆ ತಾನು ರೂಪವತಿ ಎಂಬ ಒಣ ಹೆಮ್ಮೆ ಬರುವಂತೆ ಮಾಡಿದ್ದವು.

ಎರಡನೇ ವರನಿಗೆ ಮಾಲೆ ಹಾಕುವುದು ಎಂಬ ವಿಚಾರ ತಿಳಿದಾಗ ವಿರೋಧಿಸುತ್ತಾಳೆ. ಪದ್ಮ ರಸಿಕ ಹೆಣ್ಣು. ಪ್ರೇಮ .ಸರಸ, ಸಲ್ಲಾಪ, ಶೃಂಗಾರ ಅವಳಿಗೆ ಹೊಸದಾಗಿ ಅನುಭವವಾಗಬೇಕಿತ್ತು.
ಆ ಮಧುರ ಅನುಭವಗಳಿಂದಾಗಿ ಅವಳ ಪ್ರೌಢ ಹೃದಯ ಕಾತುರಗೊಂಡಿತ್ತು. ಪ್ರಿಯನ ಪ್ರೇಯಸಿಯಾಗಿ ಗೃಹಸ್ಥನ ಗೃಹಿಣಿಯಾಗಿ ರಾಜನ ರಾಣಿಯಾಗಿ ಮೆರೆದಾಡುವ ಕಾಮನ ಬಿಲ್ಲಿನ ಕನಸುಗಳನ್ನು ಆಕೆ ತನ್ನ ಹೃದಯ ಮಂದಿರದಲ್ಲಿ ಚಿತ್ರಿಸಿಕೊಂಡಿದ್ದಳು.

ಪದ್ಮ ರಾಯರ ಕೈಯಿಡಿಯಲು ಪ್ರತಿಭಟಿಸಿದಾಗ, ಪದ್ಮಳ ತಂದೆ ಲಕ್ಷ್ಮಣರಾಯರಯ ಮಗಳನ್ನು ಮೊದಲು ಸಕಾರಣವಾಗಿ ಒಪ್ಪಿಸಲು ಪ್ರಯತ್ನಿಸಿದರು. ಹಠದಿಂದ ಒಪ್ಪಂದ ಪದ್ಮಳಿಗೆ ಅಧಿಕಾರವನ್ನು ಜಾರಿಗೆ ತಂದು 'ನೀನು ಅವರನ್ನು ಹೇಗೆ ಮದುವೆಯಾಗುವುದಿಲ್ಲವೋ ನಾನು ನೋಡೇ ಬಿಡುತ್ತೇನೆ. ನಿನಗಾಗಿ ಕಂಡವರ ಮನೆ ಬಾಗಿಲಿಗೆ ಅಲೆದು ಯೋಚಿಸಿದ್ದಾಯಿತು. ಈಗ ನಮ್ಮ ಪುಣ್ಯದಿಂದ ವರ ದೊರಕಿರುವಾಗ ಬೇಡವೆಂದು ತಿರಸ್ಕಾರಿಸುವುದು ಮೂಢತನ ಇನ್ನು ನಾನು ಯಾರ ಮನೆ ಬಾಗಿಲಿಗೂ ಹೋಗುವುದಿಲ್ಲ ನೀನು ಈತನ ಕೈಹಿಡಿಯದಿದ್ದರೆ, ಸಾಯುವವರೆಗೂ ಹೀಗೇ ಉಳಿಯಬೇಕಾಗುತ್ತದೆ'ಎಂದರು.
ಬಾಳಿನ ಕೊನೆಯ ಮೆಟ್ಟಿಲಿನವರೆಗೂ ಕನ್ಯೆಯಾಗಿಯೇ ಉಳಿಯುವ ಅಪೇಕ್ಷೆ ಪದ್ಮಳಿಗಿರಲಿಲ್ಲ. ಅಳೆದು ಸುರಿದು ಯೋಚನೆ ಮಾಡಿ ರಾಯರನ್ನೇ ವಿವಾಹವಾಗಲು ಒಪ್ಪಿಕೊಂಡಳು.

ಇಂತಹ ಪರಿಸ್ಥಿತಿಯಲ್ಲಿ ಕುಸುಮಾಳ ಮನಸ್ಸಿನಲ್ಲಿ ತನ್ನ ತಾಯಿಯ ಚಿತ್ರವು ಎಷ್ಟು ಗಾಢವಾಗಿ ಅಚ್ಚೊತ್ತಿದೆಯೆಂದರೆ ಅವಳ ಜಾಗದಲ್ಲಿ ಬೇರಾರೂ ಬರಲು ಸಾಧ್ಯವೇ ಇಲ್ಲ, ಅಲ್ಲದೇ ತನ್ನ ಮಲತಾಯಿಯ ಪ್ರಥಮ ಅನುಭವವೇ ಕುಸುಮಾಳಿಗೆ ಭಯವನ್ನುಂಟು ಮಾಡುತ್ತದೆ. ಮದುವೆಯು ಇಷ್ಟವಿಲ್ಲದೆ ಬೇರೆ ದಾರಿ ತೋಚದೆ ಒಪ್ಪಿಕೊಂಡ ವಿವಾಹಕ್ಕೆ ಪದ್ಮ ದುಃಖ, ಸಿಟ್ಟು, ನಿರಾಸೆಗಳಿಂದ ಕೂಡಿರುತ್ತಾಳೆ ಮದುವೆಯ ಹಿಂದಿನ ದಿವಸ ಪದ್ಮಳ ಗೆಳತಿಯರು ಕುಸುಮಳನ್ನು ನೋಡಿ 'ಇವಳೇ ನಿನ್ನ ರೆಡಿಮೆಡ್ ಮಗಳು ಒಪ್ಪಿಕೋ' ಎಂದು ಕುಸುಮಳನ್ನು ಪದ್ಮಳತೊಡೆಯ ಮೇಲೆ ಕೂರಿಸುತ್ತಾರೆ.' ಮದ್ದಿಗೆ ಕಿಡಿ ತಗುಲಿಸಿದಂತಾಯಿತು. ಪದ್ಮಳ ಮುಖ ರಕ್ತದಂತೆ ಕೆಂಪಾಯಿತು. ಕಕ್ಕಾಬಿಕ್ಕಿಯಾಗಿ ಮಂಕಾಗಿ ಕುಳಿತಿದ್ದ ಕುಸುಮಳನ್ನು ಪದ್ಮ ತನ್ನ ತೊಡೆಯಿಂದ ಬಲವಾಗಿ ತಳ್ಳಿದಳು.

ಕುಸುಮ ಅವಳ ತೊಡೆಯಿಂದ ಸ್ವಲ್ಪ ದೂರದಲ್ಲಿ ಮುಗ್ಗರಿಸಿ ಬಿದ್ದಳು.ಬೀಳುವಾಗ ನೆಲಕ್ಕೆ ಕೈಯನ್ನು ಆಸರೆ ಕೊಟ್ಟಿದ್ದರಿಂದ ಕುಸುಮಳ ಕೈಯಲ್ಲಿದ್ದ ಬಳೆಗಳು ನೆಲಕ್ಕೆ ತಗುಲಿ ಪುಡಿ ಪುಡಿಯಾದವು. ಕುಸುಮ ನೆಲದ ಮೇಲೆ ಎರಡು ಕೈಗಳನ್ನು ಊರಿ ನೆಲದ ಮೇಲೆ ಬಿದ್ದದಂತೆಯೇ ಅರ್ಧ ತಿರುಗಿ ಕತ್ತೆತ್ತಿ ಪದ್ಮಳ ಕಡೆ ನೋಡಿದಳು. ಕುಸುಮ ತನ್ನ ಜೀವನದಲ್ಲಿ ಮೊದಲ ಬಾರಿ ಅನಾದರ ತಿರಸ್ಕಾರದ ಬಿಸಿಯನ್ನು ಅನುಭವಿಸಿದಳು. ಅವಳ ದೊಡ್ಡ ಕಣ್ಣುಗಳನ್ನು ಮಿಂಚುತ್ತಿದ್ದವು. ಆ ಕಣ್ಣುಗಳಲ್ಲಿ ನೀರಿರಲಿಲ್ಲ, ದ್ವೇಷ ರೋಷ ಹತ್ತಿಸಿದ ಮತಾಪಿನಂತೆ ಉರಿಯುತ್ತಿದ್ದವು.

ಕಿಶೋರಾವಸ್ಥೆಯಲ್ಲಿದ್ದ ಕುಸುಮಳ ವರ್ತನೆಯನ್ನು ತನ್ನ ಇಚ್ಚೆಗೆ ವಿರುದ್ದವಾದವರನ್ನು ಮದುವೆಯಾಗಿ ತನ್ನೆಲ್ಲಾ ಆಸೆಗಳಿಗೆ ಅಡ್ಡಿಯಾಗಿರುವ ಸವತಿಯ ಮಗಳನ್ನು ದ್ವೇಷಿಸುವ ಪದ್ಮಳ ನಡುವೆ ನೆಡಯುವ ದ್ವೇಷವನ್ನು ಲೇಖಕಿ ಎಚ್ಚರಿಕೆಯಿಂದ ಚಿತ್ರಿಸಿದ್ದಾರೆ

ಇವರಿಬ್ಬವರ ಸಂಬಂದದ ಮುಖ್ಯ ತಿರುವು ತನ್ನ ತಂದೆಯಿಂದ ದೂರವಾಗಿ ಮೊದಲ ಬಾರಿಗೆ ಒಬ್ಬಳೇ ರಾತ್ರಿಯಲ್ಲಿ ಕುಸುಮ ಮಲಗಬೇಕಾಗಿ ಬಂದಾಗ ತನ್ನ ಅಭದ್ರತೆಯನ್ನು ಸೂಚಿಸುವ ಕೆಟ್ಟ ಕನಸೊಂದರಿಂದ ಮಧ್ಯರಾತ್ರಿಯಲ್ಲಿ ಕುಸುಮಾಳಿಗೆ ಎಚ್ಚರವಾಗುತ್ತದೆ. ಆ ಸನ್ನಿವೇಶವನ್ನು ಕಾದಂಬರಿಗಾರ್ತಿ ಅತ್ಯಾವಶ್ಯಕ ನಾಟಕೀಯವಾಗಿ ವಿವರವಾಗಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ

"ಪದ್ಮಳನ್ನು ವಿವಾಹವಾಗಿ ಒಂದು ವಾರವಾಗಿದ್ದರೂ ರಾಯರ ಪಾಲಿಗೆ ಹೆಂಡತಿ ಗಗನ ಕುಸುಮಾವಾಗಿಯೆ ಉಳಿದಿದ್ದರಿಂದ ರಾಯರು ಪದ್ಮಳ ಇಚ್ಚೆಯಂತೆ ಕುಸುಮಾಳನ್ನು ಪ್ರತ್ಯೇಕವಾಗಿ ಮಲಗಿಸುವ ಉಪಾಯ ಹಾಡಿ ಕುಸುಮಾಳ ಹಾಸಿಗೆಯನ್ನು ರೂಮಿನಿಂದ ನಡುಮನೆಗೆ ಹಾಕಲಾಗಿತ್ತು ಕುಸುಮಳು ರೂಮಿನಲ್ಲಿ ತನ್ನ ಹಾಸಿಗೆ ಇಲ್ಲದಿದ್ದನ್ನು ಕಂಡು ಪ್ರಶ್ನಿಸಿದಳು"
"ಅಣ್ಣ ನನ್ನ ಹಾಸಿಗೆ ಎಲ್ಲಿ?"
'ನಾವಿಬ್ಬರೂ ಹಾಲಿನಲ್ಲಿಯೇ ಮಲಗೋಣ ಕುಸುಮ"
ಕುಸುಮಾ ತಂದೆಯ ಪಕ್ಕದಲ್ಲಿ ಮಲಗಿದಳು , ರಾಯರು, ಮಗಳೊಡನೆ ಹೆಚ್ಚು ಮಾತುಗಳನ್ನು ಬೆಳಸದೇ ಮುಸುಕು ಹಾಕಿ ಕೊಂಡು ಮಲಗಿದರು.
ಮಿಂಚು ಗುಡುಗಿಗೆ ಹೆದರಿ ಕುಸುಮ ಮತ್ತಷ್ಟು ರಾಯರ ಬಳಿಗೆ ಸರಿದು ಅವರ ಕೈ ಬಿಗಿಯಾಗಿ ಹಿಡಿದುಕೊಂಡಳು
'ಅಣ್ಣ ತುಂಬಾ ಮಿಂಚ್ತಿದೆ ನಂಗೆ ಹೆದರಿಕೆ ಆಗುತ್ತೆ, ನಿನ್ನ ಕೈ ಹಿಡಿದು ಕೊಂಡು ಮಲಗಲಾ ಎಂದಳು ಆಗಲಿ' ಎಂದರು ರಾಯರು.

ಕುಸುಮಳಿಗೆ ಯಾವಾಗಲೋ ನಿದ್ದೆ ಬಂದು ಬಿಟ್ಟಿತ್ತೊ, ತಿಳಿಯದು, ನಿದ್ದೆಯಲ್ಲಿ ಕುಸುಮಳೊಂದು ಭಯಂಕರ ಕನಸುಕಂಡಳು

ಕುಸುಮ ತಂದೆಯ ಕೈಹಿಡಿದು ಹಸಿರು ಮರಗಳಿಂದ ತುಂಬಿದ ಕಾಡಿನಲ್ಲಿ ಹೋಗತ್ತಿದ್ದಳು, ಮರಗಳು ಮುಗಿಲನ್ನೆ ಮುಟ್ಟುವಂತೆ ಬೆಳೆದಿದ್ದವು ಹುಲಿ ಸಿಂಹಗಳ ಘರ್ಜನೆ ಆಗಾಗ್ಗೆ ಕೇಳಿ ಬರುತ್ತಿತ್ತು, ಕಾಡಿನಲ್ಲಿ ಹೋಗುವಾಗ ಇದ್ದಕ್ಕಿಂದತೆಯೇ ತಂದೆಯ ಕೈ ಅವಳ ಹಿಡಿಯಿಂದ ಜಾರಿತು ಹತ್ತಿರದಲ್ಲೆ ಸಿಂಹವೊಂದು ಘರ್ಜನೆ ಆಗಾಗ್ಗೆ ಕೇಳಿ ಬರುತ್ತಿತ್ತು ಕಾಡಿನಲ್ಲಿ ಹೋಗುವಾಗ ಇದ್ದಕ್ಕಿಂದತೆಯೇ ತಂದೆಯ ಕೈ ಅವಳ ಹಿಡಿಯಿಂದ ಜಾರಿತು ಹತ್ತಿರದಲ್ಲೆ ಸಿಂಹವೊಂದು ಘರ್ಜಿಸಿದ್ದ ಸದ್ದು ಕೇಳಿ ಕುಸುವ ಬೆವರಿ ಅಣ್ಣಾ' ಎಂದು ಕೂಗಿದಳು ಸುತ್ತಲೆಲ್ಲಾ ಕತ್ತಲು ಕಣ್ಣನ್ನು ತಿವಿಯುವ ಕತ್ತಲು ಕುಸುಮ ಕಾಡಿನಲ್ಲಿ ಒಂಟಿಯಾಗಿರಲಂಜಿ "ಅಣ್ಣ ಎಂದು ಮತ್ತೊಮ್ಮೆ ಕೂಗಿದಳು ಆದರೆ ತಂದೆಯಿಂದ ಪ್ರತ್ಯುತ್ತರ ಬರಲಿಲ್ಲ ಕುಸುಮ ಹೆದರಿಕೆಯಿಂದ ಅಳುತ್ತಾ; ಕತ್ತಲಲ್ಲಿ ಎಲ್ಲಿಗೆ ಹೋಗುವುದೆಂದು ದಾರಿಕಾಣದೆ ತಂದೆಗಾಗಿ ಬೊಬ್ಬಿಡುತ್ತಿದಂತೆಯೆ ಕತ್ತಲು ಕರಗಿ ಸುತ್ತಲೂ ಪ್ರಕಾಶಮಾನ ಉರಿಕಾಣಿಸಿತು ಅವಳ ಸುತ್ತಲೂ ಬೆಂಕಿ ತನ್ನ ಹಸಿರು ನಾಲಿಗೆಯನ್ನ

ನೀಡಿ ಕುಸುಮಳನ್ನು ಕಬಳಿಸಲು ಹಾತೊರೆಯುತ್ತಿತ್ತು, ಕುಣಿಯುತ್ತಿದ್ದ ಹಸಿರು ಜ್ವಾಲೆಗಳ ನಡುವೆಯಿಂದ ಅವಳ ಪ್ರೀತಿಯ ಬೆಕ್ಕು ಪಾಲಿ ಕುಸುಮಳ ಬಳಿಗೋಡಿ ಬಂದಿತು. ಪಾಲಿ ಕ್ರಮೇಣ ನಾಯಿಗಾತ್ರವಾಗಿ ಎತ್ತಿನಗಾತ್ರವಾಗಿ ಅನಂತರ ಆನೆಯಗಾತ್ರವಾಗಿ ಹುಲಿಯಮತೆ ಆರ್ಭಟಿಸಿ ಛಂಗನೆ ಹಾರಿತು.

ತನ್ನ ತಂದೆ ಕಾಡಿನಲ್ಲಿ ಕೈ ಬಿಡುವುದು ಮುಂದಿನ ದುಸ್ಥಿತಿಯನ್ನು ಕುಸುಮ ಕುಸುಮಳ ಪಾಲಿಗೆ ದೊರೆಯುವ ಅಭಾಗ್ಯವನ್ನು ಸೂಚಿಸುತ್ತದೆ. ಪಾಲಿಯು ಹುಲಿಗಾತ್ರವಾಗಿ ಇವಳ ಮೇಲೆ ಎರಗುವ ಕ್ರಿಯೆಯು  ಪಾಲಿಯ ಕಣ್ಣಿನಂತೆ ತನ್ನ ಚಿಕ್ಕಮ್ಮ ಇವಳ ಜೀವನವನ್ನು ದುಸ್ಥಿತಿಗೆ ತಳ್ಳುವ ದ್ವೇಷಿಸುವಿಕೆಯನ್ನು ಸೂಚಿಸುವ ಮುನ್ಸೂಚನೆಯಂತೆ ಈ ಕನಸು ಪ್ರತಿಬಿಂಭಿಸುತ್ತದೆ.

ಕುಸುಮಾ ಭಟಾರನೆ ಸಿಡಿದ ಸಿಡಿಲಿನ ದನಿ ಕೇಳಿ ಎಚ್ಚೆತ್ತಳು ಕಣ್ಣು ಕುರುಡಾದಂತೆ ಆಕಾಶದಲ್ಲಿ ನೂರಾರು ಮಿಂಚು ಕೋಲುಗಳು ಹೊಳೆ ಹೊಳೆದು ಮಾಯವಾಗುತ್ತಿದ್ದವು

ಆ ಮಿಂಚುಗಳ ಬೆನ್ನಟ್ಟಿ ಬಂದಂತೆ ಗುಡುಗು ಸಿಡಿಲು ಭೂಮಿಯನ್ನೆ ಅದುರಿಸುವಂತೆ ಸದ್ದು ಮಾಡುತ್ತಿದ್ದವು ಗಾಳಿಯ ಮೊರೆತವಂತು ಎಲ್ಲಕ್ಕಿಂತಲೂ ಅಸಾಧ್ಯವಾಗಿತ್ತು

ಪ್ರಕೃತಿಯ ರುದ್ರನಾಟ್ಯ ಕನಸಿನ ಭೀಕರತೆಯ ನಡುವೆ ಸಿಕ್ಕಿ ಬೇಟೆಗಾರರಿಂದ ಸುತ್ತುವರಿಯಲ್ಪಟ್ಟ ಮೊಲದಂತೆ ಕುಸುಮ ತಲ್ಲಣಿಸಿದಳು ಹಾಸಿಗೆಯ ಮೇಲಿದ್ದ ಶರೀರ ಭೀತಿಯಿಂದ ಗಡಗಡನೆ ನಡುಗುತ್ತಿತ್ತು. ಆ ಚಳಿಯಲ್ಲಿಯೂ ಅವಳ ದೇಹ ಬೆವೆತು ಹೋಗಿತ್ತು ಮಿಂಚಿನ ಹೊಳೆದಾಟ  ಗುಡುಗಿನ ಆರ್ಭಟ ಕತ್ತಲಿನ ಭೀಕರತೆ ಕೆಟ್ಟ ಕನಸು, ಇದಕ್ಕೆ ಹೆದರಿ ಕುಸುಮ ತಂದೆಯನಪ್ಪಲು ಕೈಚಾಚಿದಳು ತಂದೆಯ ಬದಲು ಅವಳ ಕೈ ತಣ್ಣಗೆ ಕೊರೆಯುತ್ತಿದ್ದ ನೆಲದ ಮೇಲೆ ಇತ್ತು. ಕುಸುಮ ಹೆದರಿ ಕಂಗಾಲಾಗಿ ಪಕ್ಕಕ್ಕೆ ತಿರುಗಿ ನೋಡಿದಳು ಕತ್ತಲೆಯಲ್ಲಿ ಅವಳಿಗೆ ಏನೂ ಕಾಣಲಿಲ್ಲ, ಮಿಂಚೊಂದು ಕಣ್ಣು ಕೋರೈಸುವಂತೆ ಮಿಂಚಿ ಪಕ್ಕದ ಖಾಲಿ ಜಾಗವನ್ನು ಕುಸುಮಳಿಗೆ ನಿಚ್ಚಳವಾಗಿ ಎತ್ತಿ ತೋರಿತು. ಆ ಮಿಂಚು ಅಡಗುವಷ್ಟರಲ್ಲಿ ದೊಡ್ಡಗುಡುಗೊಂದು ಮೊರೆಮೊರೆದು ಬಂದು ಮನೆಯ ಮೇಲೆ ಬಂದಿಳಿಯಿತೆನೋ ಎನ್ನುವಷ್ಟು ಸದ್ದು ಮಾಡಿತು

ಕುಸುಮ ಗಟ್ಟಿಯಾಗಿ ಚೀರಿದಳು.

"ಅಣ್ಣಾ....... ಅಣ್ಣಾ....... ಅಣ್ಣಾ......."

ಅವಳ ಕರೆಗೆ ಯಾರೂ ಓಗೊಡಲಿಲ್ಲ ತಂದೆ ತನ್ನನ್ನು ಈ ರೀತಿ ಮೋಸಗೊಳಿಸಬಹುದೆಂದು ಕುಸುಮ ಕನಸಿನಲ್ಲಿಯೂ ಎಣಿಸಿರಲಿಲ್ಲ. ಹೃದಯವನ್ನು ನಡುಗಿಸುತ್ತಿದ್ದ ಹೆದರಿಕೆಯೊಡನೆ ತಂದೆಯ ಮೋಸವೂ ಸೇರಿರುವುದರಿಂದ ಕುಸುಮ ಮತ್ತೊಮ್ಮೆ ಹುಚ್ಚಿಯಂತೆ ಚೀರಿದಳು.ಅಬ್ಬರಿಸುತ್ತಿದ್ದ ಗುಡುಗಿನ ಸದ್ದನ್ನು ಮೆಟ್ಟಿ ತುಳಿಯುವಂತೆ  ಈ ಬಾರಿಯೂ ಕುಸುಮಾಳಿಗೆ ತಂದೆಯಿಂದ ಉತ್ತರ ಬರಲಿಲ್ಲ.ಬದಲು ರೂಮಿನ ಬಾಗಿಲು ನಿಧಾನವಾಗಿ ಅರ್ಧ ತೆರೆಯಿತು.ಹೊಸಲಿನ ಆಚೆ ಪದ್ಮ ಕೈಲಿ ಲಾಂಧ್ರವನ್ನು ಹಿಡಿದು ನಿಂತಿದ್ದಳು.

'ಸುಮ್ಮನೆ ಮಲಿಗಿಕೊಳ್ಳದ್ದಿದ್ದರೆ ತೆಗೆದು ಬೀದಿಗೆ ತಳ್ಳುತ್ತೇನೆ' ಎಂದಳು. ಕೋಪ, ದ್ವೇಷದಿಂದ ಬಿಗಿದು ಬಂದ ಬಿರುಸಾದ ಧ್ವನಿಯಲ್ಲಿ

ಕುಸುಮಾಳಿಗೆ ಮಾತಾನಾಡುವ ಶಕ್ತಿ ಇರಲಿಲ್ಲ.. ಸ್ವಪ್ನದಲ್ಲಿರುವವಳಂತೆ ತನ್ನ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿದ್ದ ಒಂದು ಜೊತೆ ಹಸಿರು ಕಣ್ಣುಗಳನ್ನೇ ಭೂತ ಹಿಡಿದವಳಂತೆ ನೋಡಿದಳು.ಪದ್ಮಳ ಕಣ್ಣುಗಳು ಚಕ್ರಾಕಾರವಾಗಿ ನೋಡುವವರನ್ನು ಬೆದರಿಸುವಂತೆ ಗಿರಗಿರನೆ ತಿರುಗುತ್ತಿದ್ದವು. ತೀಕ್ಷ್ಣನೋಟ, ಕೆಂಚು ಕೂದಲು, ಉಬ್ಬು ಹಲ್ಲು ,ಕತ್ತಿಯ ಮೊನೆಯಂತೆ ಹೃದಯವನ್ನು ಸೀಳುತ್ತಿದ್ದ ದನಿ ಕುಸುಮಾಳ ಶರೀರ ಬಿರುಗಾಳಿಗೆ ಸಿಕ್ಕಿದ ತರಗೆಲೆಯಂತೆ ನಡಗಿತು.

"ಅಣ್ಣಾ.........ಅ.........ಣ್ಣಾ___ಕುಸುಮ ತೊದಲುತ್ತಲೇ ಇದ್ದಳು.ಪದ್ಮ ತನ್ನ ಬಲಗೈಯಿಂದ ಕುಸುಮಾಳ ಬಾಯನ್ನು ಒತ್ತಿ ಹಿಡಿದು .

"ಬಾಯಿ ಮುಚ್ಚಿಕೊಂಡು ಮಲಗು,ಇಲ್ಲದ್ದಿದ್ದರೆ......" ಎಂದಳು.
ಎದುರಿಗೆ ನಿಂತಿದ್ದ ಭಯಾನಕ ವಿಕೃತ ರೂಪಿಗಿಂತಲೂ ಕಣ್ಣು ಕುರುಡಾಗುವಂತೆ ಮಿಂಚುತ್ತಿದ್ದ ಕೋಲ್ಮಿಂಚು ನಯನ ಮನೋಹರವಾಗಿ ತೋರಿತು. ಕುಸುಮಾಳಿಗೆ ಪದ್ಮಳ ಕರ್ಕಶ ಧ್ವನಿಗಿಂತಲೂ ಸಿಡಿಲಿನ ಆರ್ಭಟ ಕಿವಿಗಿಂಪೆನಿಸಿತು. ಚಿಕ್ಕಮ್ಮನ ಕರಾಳ ರೂಪ ತನ್ನಿಂದ ದೂರ ಹೋದರೆ ಸಾಕೆನಿಸಿತು. ಹೆದರಿದ್ದ ಕುಸುಮಾಳಿಗೆ

...............................

ಚಿಕ್ಕಮ್ಮನ ಆವೇಶಗೊಂಡಿದ್ದ ಮುಖ ಹಸಿರು ಮಣಿಗಳಂತೆ ಹೊಳೆಯುತ್ತಿದ್ದ ದ್ವೇಷದ ತವರೂರಾದ ಕಂಗಳ ತೀಕ್ಷ್ಣತೆಯನ್ನು ನೆನೆದು ಕುಸುಮಾಳ ದೇಹದ ರಕ್ತ ಹೆಪ್ಪುಗಟ್ಟಿತ್ತು. ಅವಳ ಕೈಕಾಲುಗಳು ಕಡಿದ ಮರದ ತುಂಡಿನಂತೆ ಬಿದ್ದಿದ್ದವು. ಬೆಳಗಾದರೆ ಸಾಕು ಎಂದು ಬೆಳಕಿಕಾಗಿ ಅವಳ ಬೆದರಿದ ಹೃದಯ ಹುಡುಕಾಡಿತು, ರಾತ್ರಿ ಅನಂತವಾಗಿ ಘೋರವಾಗಿ ರುದ್ರವಾಗಿ ತೋರಿತ್ತು.

ಈ ರಾತ್ರಿಗೆ ಕೊನೆಯೇ ಇಲ್ಲವೇ? ಬೇಗ ಬೆಳಗಾಗ ಬಾರದೇ?

ಮಿಂಚು ಗುಡುಗುಗಳಾರ್ಭಟಿಸುತ್ತಿದ್ದ ಘೋರ ನಿಶೆಯಲ್ಲಿ ತಬ್ಬಲಿಯಂತೆ ಕುಸುಮ ಬಿಕ್ಕಿ ಬಿಕ್ಕಿ ಅತ್ತಳು"

ಈ ಭಯಂಕರ ಅನುಭವವು ಕುಸುಮಳ ಬಾಳಿನಲ್ಲಿ ಎಂದು ಮರೆಯಲಾಗದ ಘಾತಕ ಗಾಯವಾಗಿ ಉಳಿಯುತ್ತದೆ. ತನ್ನ ಚಿಕ್ಕಮ್ಮನನ್ನು ಅವಳು ತಿವ್ರವಾಗಿ ದ್ವೇಷಿಸಲು ಮತ್ತು ಅವಳಿಗೆ ಹೆದರಲು ಪ್ರಾರಂಭಿಸುತ್ತಾಳೆ, ದಿನದಿಂದ ದಿನದಿನಕ್ಕೆ ಇವರಿಬ್ಬರ ಮಧ್ಯೆ ವೈಷಮ್ಯ ಬೆಳೆಯುತ್ತಲೆ ಹೋಗುತ್ತದೆ. ಮೊದಲು ಕುಸುಮಾ ತನ್ನ ತಂದೆಯಿಂದ ದೂರವಾಗಿ ಒಬ್ಬಳೇ ಮಲಗಬೇಕಾಗುತ್ತದೆ. ಅನಂತರ ಅವಳ ಪಾಕೆಟ್ ಮನಿ ನಿಲ್ಲುತ್ತದೆ. ಕೊನೆಗೆ ಅವಳ ಅಜ್ಜಿ ಕೊಟ್ಟ

ಚಿನ್ನದ ಸರ ತನ್ನ ಚಿಕ್ಕಮ್ಮನಿಂದಲೇ ಕಳವಾಗುತ್ತದೆ, ಕ್ಷುಲ್ಲಕ ಕಾರಣಗಳಿಗಾಗಿ ಅವಳು ಚಿಕ್ಕಮ್ಮನಿಂದ ಶಿಕ್ಷೆಗೆ ಒಳಗಾಗಿ ಹಸಿವಿನಿಂದ ನರಳುವಂತಾಗುತ್ತದೆ.

ಮಲತಾಯಿಯನ್ನು ಹಿಂತಿರುಗಿ ಹೊಡೆಯಲು ಚೈತನ್ಯವಿಲ್ಲದ ಕುಸುಮ ತನ್ನ ಪ್ರೀತಿಯ ಬೆಕ್ಕು ಪಾಲಿಯನ್ನು ದಂಡಿಸಲು ಪ್ರಾರಂಭಿಸುತ್ತಾಳೆ. ಏಕೆಂದರೆ ಅವಲ ಸುಪ್ತ ಚಿತ್ತ ಬೆಕ್ಕಿನ ಕಣ್ಣುಗಳನ್ನು ಅವಳ ಚಿಕ್ಕಮ್ಮನ ಕಣ್ಣುಗಳೊಡನೆ ಹೋಲಿಕೆಯಿದ್ದರಿಂದದ ಹಾಗೂ ಚಿಕ್ಕಮ್ಮನ ಬಗ್ಗೆ ಇರುವ ದ್ವೇಷವೆಲ್ಲವನ್ನು ಬೆಕ್ಕಗೆ ವರ್ಗಾಯಿಸುತ್ತಿದ್ದಳು ಅವಳಿಗೆ ಸಿಕ್ಕುತ್ತಿದ್ದ ಪಾಕೆಟ್ ಮನಿ ನಿಲ್ಲಿಸಲ್ಪಟ್ಟದ್ದರಿಂದ ಅವಳು ಮನೆಯಲ್ಲಿ ಮತ್ತು ಶಾಲೆಯಲ್ಲಿ ಕಳ್ಳತನ ಮಾಡಲು ಆರಂಭಿಸುತ್ತಾಳೆ ಶಾಲೆಯಲ್ಲಿ ಮಾಡಿದ ಕಳ್ಳತನಕ್ಕೆ ಶಿಕ್ಷೆಗೆ ಒಳಗಾದಗೆಲ್ಲಾ ಹಸಿರು ಕಣ್ಣುಗಳುಳ್ಳ ತನ್ನ ಸಹಪಾಠಿಯ ಮೇಲೆ ತನ್ನೆಲ್ಲಾ ರೋಷವನ್ನೂ ತೀರಿಸಿ ಕೊಳ್ಳುತ್ತಾಳೆ.

ಮಗಳಿಗೆ ಏನೋ ದೆವ್ವ ಹಿಡಿದಿದೆಯೆಂಬ ನೆರೆಹೊರೆಯವರ ಮಾತಿಗೆ ತಂದೆ ಮನ್ನಣೆಯಿತ್ತು ಅವಳಿಗೆ ಯಂತ್ರ ಮಂತ್ರಗಳ ಭಯಂಕರ ಚಿಕಿತ್ಸೆ ನಡೆಯುತ್ತದೆ. ಈ ವೇಳೆಗೆ ಕುಸುಮ ಹದಿನಾರು ವರ್ಷಗಳ ನವಯುವತಿಯಾಗಿರುತ್ತಾಳೆ. ಅದರೊಂದಿಗೆ ಹುಚ್ಚಿಯೆಂಬ ಪಟ್ಟವೂ ಅವಳಿಗೆ ಬಂದಿರುತ್ತದೆ. ಈ ಸನ್ನಿವೇಶದಲ್ಲಿ ಪದ್ಮಳ ಸಹೋದರ ರಾಜಶೇಖರನ ಆಗಮನವಾಗುತ್ತದೆ, ಮನಶ್ಯಾಸ್ತ್ರದಲ್ಲಿ ಪದವಿ ಪಡೆದು ಅಕ್ಕನ ಮನೆಗೆ ಬಂದಿರುತ್ತಾನೆ, ಕುಸುಮಳ ಬಗೆಗೆ ಅನುಕಂಪ ಉಂಟಾಗಿ ಪದ್ಮಳ ವಿರುದ್ದವಾಗಿ ಕುಸುಮಳನ್ನು ಮಾನಸಿಕ ಚಿಕಿತ್ಸಾಲಯಕ್ಕೆ ಸೇರಿಸುತ್ತಾರೆ.

"ರಾಜಶೇಖರ ಮಾತ್ರ ಅವಳ ಬಗ್ಗೆ ಅನುಕಂಪ ತೋರಿಸಿ ಅವಳಿಗೆ ಪ್ರೀತಿ ಹಾಗೂ ಸಾಂತ್ವನವನ್ನು ನೀಡುತ್ತಾನೆ. ಅವಳಲ್ಲಿ ಆಸಕ್ತಿ ತೋರುವವನು ಕೇವಲ ಅವನೊಬ್ಬನಾದುದರಿಂದ ಕುಸುಮ ಅವನೆಡೆಗೆ ಹೆಚ್ಚು ಆಕರ್ಷಿತಳಾಗುತ್ತಾಳೆ, ಈ ಸಂಧರ್ಭದಲ್ಲಿ ಅವಳನ್ನು ತಾನು ಮದುವೆಯಾಗುತ್ತೆನೆಂದೂ ಭರವಸೆ ಕೂಡ ಕೋಡುತ್ತಾನೆ ಈ ವಿಷಯದಲ್ಲಿ ಪದ್ಮ ವಿರೋಧಿಯಾಗಿರುತ್ತಾಳೆ.

ಕುಸುಮಾಳ ಮಾನಸಿಕ ಅಸ್ವಸ್ಥತೆಗೆ ಕಾರಣವಾಗಿರುವ ಪದ್ಮ ಹಾಗೂ ಕುಸುಮಾಳ ನಡುವಿನ ಮುಖಾಮುಖಿಯನ್ನು ತ್ರಿವೇಣಿವರು ಪರಿಣಾಮಕಾರಿಯಾಗಿ ಚಿತ್ರಿಸುತ್ತಾರೆ."[೧]

ಉಚ್ಚ ಶಿಕ್ಷಣ ಪಡೆದ ರಾಜಶೇಖರ ಕುಸುಮಾಳನ್ನು ವಿವಾಹವಾಗುವುದನ್ನು ಸಹಿಸದ ಪದ್ಮ ತಮ್ಮನೊಡನೆ ಒಡಾಡುವುದನ್ನು ನಿಲ್ಲಿಸಬೇಕೆಂದು ಅಧಿಕಾರಯುತ ಧ್ವನಿಯಿಂದ ಪದ್ಮ ಆಜ್ಞಾಪಿಸುತ್ತಾಳೆ.

ಆಗ ಮೊದಲಿನಿಂದಲೂ ತನ್ನ ಬಾಳನ್ನು ವಿರೂಪಗೊಳಿಸಿದ ತನ್ನ ಚಿಕ್ಕಮ್ಮ ತನಗೆ ದೊರಕಿರುವ ರಾಜಶೇಖರನೆಂಬ ಒಂದೇ ಒಂದು ಭಾಗ್ಯವನ್ನು ಅಪಹರಿಸಲಿರುವಳೆಂದು ತಿಳಿದು ಕುಸುಮ ಉನ್ಮಾದಿನಿಯಂತಾದಳು. ರಾಜಶೇಖರನ ಒಲವು ಪಡೆದಾಗ ಪ್ರಪಂಚ ತಾನು ಅಂದುಕೊಂಡಷ್ಟು ಕ್ರೂರವಾಗಿಲ್ಲ ಎಂದು ನಂಬುತ್ತಾಳೆ. ಆದರೆ ಮತ್ತೆ ಪದ್ಮಳಿಂದ ಮತ್ತೆ

ಪ್ರಪಂಚದ ಭೀಕರ ಅರಿವು ಆಗುತ್ತದೆ. 'ಮನುಷ್ಯರನ್ನು ಮೃಗಗಳಂತೆ ಕಾಣುವ ಈ ಕೆಟ್ಟ ಪ್ರಪಂಚದಲ್ಲಿ ನಮ್ಮಂತಹ ಮುಗ್ಧರು ಏಕೆ ಇರಬೇಕು?' ಎಲ್ಲವನ್ನೂ ಮರೆತು ಬಿಡಬೇಕು. 'ನೆನಪು ಕಹಿಯಾಗಲಿ, ಸಿಹಿಯಾಗಲಿ ಅದರ ಬಲೆಗೆ ಬಿದ್ದು ಒದ್ದಾಡುವುದಕ್ಕಿಂತ ಎಲ್ಲವನ್ನೂ ಮರೆತು ಬಿಡುವುದು ಲೇಸಲ್ಲವೇ?' ಮರೆವಿನಲ್ಲಿ ದುಃಖವಿಲ್ಲ, ಸುಖವಿಲ್ಲ. ಅಣ್ಣ, ಚಿಕ್ಕಮ್ಮ, ವಿದ್ಯಾ, ರಾಜಶೇಖರ ಕೊನೆಗೆ ತನ್ನನ್ನು ಮರೆತು ಎಲ್ಲಾ ಭಾವನೆಗಳನ್ನು ಕಿತ್ತೆಸೆದು ಹಾಳಾಗಿ ಹೋಗುವುದು ಮೇಲಲ್ಲವೇ.?

'ಕುಸುಮ ಮನಸ್ಸನ್ನು ಬಿಗಿಹಿಡಿದು ರಾಜಶೇಖರ ನನ್ನನ್ನು ಪ್ರೀತಿಸುತ್ತಾರೆ' ಎಂದಳು.

ಪದ್ಮ ನಕ್ಕಳು ಅವಳ ನಗು ಕರ್ಕಶವಾಗಿತ್ತು. ವ್ಯಂಗ್ಯವಾಗಿತ್ತು. ಅವಳ ಕಣ್ಣುಗಳಿಗಿಂತಲೂ ವಿಕಟವಾಗಿತ್ತು ಅವಳ ನಗು,ಕುಸುಮ ಚಿಕ್ಕಮ್ಮಳ ನಗುವಿನ ಅರ್ಥ ತಿಳಿಯದೇ ಮತ್ತೊಂದು ಬಾರಿ ಒತ್ತಿ ಹೇಳಿದಳು.

"ಅವರು ನನ್ನನ್ನು ಪ್ರೀತಿಸುತ್ತಾರೆ, ನಾನೂ........

"ಇದಕ್ಕಿಂತಲೂ ತಮಾಷೆ ಬೇಕೇ?ಹುಚ್ಚಿಯನ್ನು ಯಾರಾದರೂ ಪ್ರೀತಿಸುತ್ತಾರೆಯೇ?

ಹುಚ್ಚಿ! ಯಾರು? ತಾನು ಹುಚ್ಚಿಯೆ?

ಎಂದಿನಿಂದ ಕುಸುಮಾಳ ಮನಸ್ಸಿನಲ್ಲಿ ಸಂದೇಹ ಅವಮಾನ ಭೀತಿಯ ಅಲೆಗಳು ಏಳತೊಡಗಿದವು.ಬಿರುಗಾಳಿಯ ಹೊಡೆತಕ್ಕೆ ಸಾಗರದಲ್ಲೇಳುವ ಅಲೆಗಳಂತೆ ಪದ್ಮಳ ಕರ್ಕಶ ನಗು ಅವಳ ಕಿವಿಯಲ್ಲಿ ಮೊರೆಯುತ್ತಲೇ ಇತ್ತು.

ಹುಚ್ಚಿ! ಹುಚ್ಚಿ!!

"ಸುಳ್ಳು !"ಕುಸುಮ ತನಗೆ ತಾನೇ ಹೇಳಿಕೊಂಡಳು.

"ನಿಜ; ನೀನು ಹುಚ್ಚಿ!!

ಎಲ್ಲವನ್ನೂ, ಎಲ್ಲರನ್ನೂ ಮರೆತು ಬಿಡಬಾರದೇ? ಮರೆತುಬಿಡು ಅದರಲ್ಲಿಯೇ ಏನೋ ಶಾಂತಿಯಿದೆ,ಮುಕ್ತಿಯಿದೆ. ಎಲ್ಲ ಮರೆತುಬಿಡು.

ಪದ್ಮ ನಗುತ್ತಲೇ ಇದ್ದಳು.ಅವಳ ನಗುವನ್ನು ಕುಸುಮಾಳಿಂದ ಕೇಳಲಾಗಲಿಲ್ಲ. ರೂಮಿನಲ್ಲಿದ್ದ ಮಂಚ, ಹಾಸಿಗೆ,ಗೋಡೆದೀಪ ಎಲ್ಲವೂ ಪದ್ಮಳೊಡನೆ ಕೇಕೆ ಹಾಕಿ ನಗುತ್ತಿರುವಂತೆ ಭಾಸವಾಯಿತು. ಪದ್ಮ ವಿಹ್ವಲಳಾಗಿ, ಭೀತಳಾಗಿ ತನ್ನ ಸುತ್ತಲೂ ಬಿರಬಿರನೆ ನೋಡಿದಳು. ಅವಳ ಮಿದುಳನ್ನು ನಗು ಕೊರೆಯುತ್ತಿತ್ತು. ಕಣ್ಣುಗಳಲ್ಲಿ ನೀರು ತುಂಬಿಕೊಂಡು ಎಲ್ಲವೂ ಮಸುಕಾಗಿ ಕಾಣಿಸಿದವು.ಎದುರಿಗಿದ್ದ ಪ್ರತಿಯೊಂದು ವಸ್ತುವು ತೇಲುತ್ತಿರುವಂತೆ, ತಿರುಗುತ್ತಿರುವಂತೆ ಭಾಸವಾಯಿತು.ಕುಸುಮ ಭೀತಿಯಿಂದ ಕೈಗೆ ಸಿಕ್ಕಿದ ಪುಸ್ತಕವನ್ನು ತೆಗೆದುಕೊಂಡು ನಗು ಅಲೆಅಲೆಯಾಗಿ ತೇಲಿಬರುತ್ತಿದ್ದ ದಿಕ್ಕಿನ ಕಡೆ ಬೀಸಿ ಎಸೆದಳು. ಜಡವಸ್ತುಗಳೆಲ್ಲಾ ಜೀವತಾಳಿ ಗಹಗಹಿಸಿ ನಗುತ್ತಾ ಒಟ್ಟಿಗೆ ಅವಳ ಮೈಮೇಲೆ ಏರಿಬಂದಂತಾಯಿತು.

ಕುಸುಮ ಚಿಟ್ಟನೆ ಚೀರಿದಳು.

ಒಳಗೆ ಹೊಗೆಯಾಡುತ್ತಿದ್ದ ಜ್ವಾಲಾಮುಖಿ ಆಸ್ಫೋಟವಾಯಿತು.

"ಅನಂತರ ಎಲ್ಲವೂ ಮೌನ ,ಶೂನ್ಯ!"

ಮತ್ತೆ ಕುಸುಮಾಳಿಗೆ ಎಚ್ಚರವಾದಾಗ ,ಮಾನಸಿಕ ಚಿಕಿತ್ಸಾಲಯದಲ್ಲಿರುತ್ತಾಳೆ.ಇಲ್ಲಿ ಕುಸುಮಳು ಚಿಕಿತ್ಸೆ ಪಡೆದು ಮೊದಲಿನಂತಾಗುವಿಕೆಯು ಯಾವುದೋ ಕಾಲ್ಪನಿಕ ಕಥೆಯಲ್ಲೋ, ಸಿನಿಮಾದಲ್ಲೋ ಆದಂತೆ ರೋಚಕವಾಗಿ ಆಗದೇ ವಾಸ್ತವವಾಗಿ ನಡೆಯುವಂತೆ ಭಾಸವಾಗುತ್ತದೆ. ಇಲ್ಲಿ ಲೇಖಕಿಯು ಮನಃಶಾಸ್ತ್ರ ಮತ್ತು ಮಾನಸಿಕ ಆಸ್ಪತ್ರೆ ಹಾಗೂ ರೋಗಿಗಳು ಅವರ ವರ್ತನೆ ಬಗೆಗಿರುವ ಜ್ಞಾನ ಕಾರಣವಾಗಿದೆ.

ರಾಜಶೇಖರ ತಾಳ್ಮೆ ಹಾಗೂ ಕಾಳಜಿ ಮಲತಾಯಿಯ ಪಶ್ಚಾತಾಪಪೂರ್ಣ ನಡವಳಿಕೆ ,ಇಷ್ಟಿದ್ದರೂ ಕುಸುಮ ಗುಣವಾಗಲು ಒಂದು ವರ್ಷಕ್ಕಿಂತಲೂ ಹೆಚ್ಚು ಕಾಲ ಬೇಕಾಗುತ್ತದೆ.

"ಈ ಕಾದಂಬರಿಯಲ್ಲಿ ಮಲತಾಯಿ ಪದ್ಮ ಕುಸುಮಾಳ ಬಗೆಗೆ ವರ್ತಿಸುವಿಕೆ ಅವಳಲ್ಲಿನ ಕೆಟ್ಟಗುಣಗಳನ್ನು ಬಯಲಿಗೆಳೆದರೂ ಆದರೆ ನಾವು ಅವಳು ಹಾಗೆ ವರ್ತಿಸಲು ತನ್ನ ಅನ್ಯಾಯವೇ ಅವಳನ್ನು ಹಾಗೆ ಮಾಡಲು ಪ್ರಚೋದಿಸುತ್ತಿರುವುದನ್ನು ಕಾಣಬಹುದು."[೨]

ಆದರೆ ತನ್ನ ದ್ವೇಷದಿಂದಾಗಿ ಕುಸುಮಾ ಮನೋವೈಕಲ್ಪಕ್ಕೆ ತುತ್ತಾಗಿ ಚಿಕಿತ್ಸಾಲಯವನ್ನು ಸೇರಬೇಕಾಗಿ ಬಂದಾಗ ಅವಳಿಗೆ ನಿಜವಾಗಿಯೂ ದುಃಖವಾಗುತ್ತದೆ. ವೈದ್ಯರೊಂದಿಗೆ ತನ್ನೆಲ್ಲಾ ತಪ್ಪುಗಳನ್ನು ಪ್ರಾಮಾಣಿಕವಾಗಿ ಒಪ್ಪಿಕೊಂಡು "ಅವಳಿಗೆ ಹುಚ್ಚು ಹಿಡಿಯಲಿ ಎಂದು ನನ್ನ ಅಭಿಲಾಷೆಯಾಗಿರಲಿಲ್ಲ. ಡಾಕ್ಟರ್, ನಾನು ಅವಳನ್ನು ಪ್ರೀತಿಸಲಿಲ್ಲ ನಿಜ ,ಅವಳ ಹಠಮಾರಿತನಕ್ಕೆ ಹೊಡೆಯಬೇಕಾಯಿತು. ಅದೂ ನಿಜ ಆದರೆ ಅವಳಿಗೆ ಈ ಖಾಯಿಲೆ ಬರಲಿ ಎಂದು ಮಾತ್ರ ನಾನು ಅಪೇಕ್ಷಿಸಲಿಲ್ಲ.ಇಷ್ಟು ಖಂಡಿತವಾಗಿಯೂ ಸತ್ಯ"ಎಂದು ದುಃಖಿಸುತ್ತಾಳೆ.

ತ್ರೀವೇಣಿಯವರು ಆಸ್ಪತ್ರೆಯಲ್ಲಿ ಕುಸುಮಾಳ ಖಾಯಿಲೆ ಗುಣವಾಗುವಿಕೆ ಅಲ್ಲದೇ ಅಲ್ಲಿರುವ ರೋಗಿಗಳು ಹಾಗೂ ಅವರು ಕುಸುಮಾಳೊಂದಿಗೆ ಬೆಳೆಸುವ ಸ್ನೇಹವನ್ನು ಹೇಳುವಲ್ಲಿ ಮಾನಸಿಕ ಆಸ್ಪತ್ರೆಯ ಸ್ಪಷ್ಟ ಚಿತ್ರಣ ಓದುಗರಿಗೆ ಲಭ್ಯವಾಗುತ್ತದೆ.

ಪ್ರಮುಖವಾಗಿ ಈ ಕಾದಂಬರಿಯಲ್ಲಿ ಕಿಶೋರಾವಸ್ಥೆಯಲ್ಲಿನ ಕುಸುಮಾ 'ಸ್ಥಾನಾಂತರ' ಎಂಬ ಮನೋವೈಕಲ್ಯವನ್ನು ಅನುಭವಿಸುತ್ತಿರುತ್ತಾಳೆ.(Displacement )ತನ್ನ ಚಿಕ್ಕಮ್ಮಳ ದೂಷಣೆಯಿಂದ ದಂಡನೆಯಿಂದ ರಕ್ಷಿಸಿಕೊಳ್ಳಲು 'ಸ್ಥಾನಾಂತರ' ಎಂಬ ಮಾನಸಿಕ ವೈಕಲ್ಯವನ್ನು ಒಂದು ವಿಧದ 'ರಕ್ಷಣಾತಂತ್ರದಂತೆ'(Defence mechanism)ಬೆಳೆಸಿಕೊಂಡು ಅದರಿಂದ ನರಳುವಿಕೆಯನ್ನು ಮನಮುಟ್ಟುವಂತೆ ಚಿತ್ರಿಸಿದ್ದಾರೆ.ಮಾನಸಿಕ ಆಸ್ಪತ್ರೆಯಲ್ಲಿ ಕೂಡ ಅಲ್ಲಿನ ರೋಗಿಗಳು ಅವರ ಮನೋರೋಗಗಳಿಗೆ ಅನೇಕ ಕಾರಣಗಳಿಂದ ಆಸ್ಪತ್ರೆ ಸೇರಿರುತ್ತಾರೆ.

ಸುಶೀಲಳೆಂಬ ಮನೋರೋಗಿಯ ಮನೆಯವರು ವರದಕ್ಷಿಣೆ ಕೊಟ್ಟು ಅವಳ ಮದುವೆ ಮಾಡುವಷ್ಟು ಶಕ್ತರಿರಲಿಲ್ಲ. ಮತ್ತೆ ಮತ್ತೆ ತನ್ನನ್ನು ನೋಡಲು ಬಂದ ಯುವಕರು ವರೋಪಚಾರವನ್ನು ಇವರು ಮಾಡಲಾರರು ಎಂಬ ಒಂದೇ ಕಾರಣಕ್ಕಾಗಿ ಅವಳನ್ನು ತಿರಸ್ಕರಿಸಿದಾಗ ಸಾವಿತ್ರಮ್ಮ ಶಾಲಾಶಿಕ್ಷಕಿಯಾಗಿ ಕಷ್ಟದಿಂದ ಉಳಿಸಿದ ಹಣವನ್ನೆಲ್ಲಾ ಶ್ರೀಮಂತನೊಬ್ಬನಲ್ಲಿ ಇಟ್ಟಿದ್ದಳು.ಒಂದು ದಿನ ಇದ್ದಕ್ಕಿಂದ್ದಂತೆಯೇ ಅವಳ ಹಣದೊಡನೆ ಆ ಶ್ರೀಮಂತ ಮಾಯಾವಾದಾಗ ಅವಳ ಎದೆಯೊಡೆದು ಇಲ್ಲಿಗೆ ಬಂದು ಸೇರುತ್ತಾಳೆ. ತನ್ನ ಪ್ರೀತಿಯ ಒಬ್ಬಳೇ ಮಗಳು ಇದ್ದಕ್ಕಿದ್ದಂತೆ ಅಸುನೀಗಿದಾಗ ಆ ಅಪಾರ ಶೋಕ ಉನ್ಮಾದವಾಗಿ ಲಕ್ಷ್ಮಮ್ಮ ಮುಟ್ಟು ನಿಲ್ಲುವ ವಯಸ್ಸಿನಲ್ಲಿ ಅಂದರೆ "ಮನೋಪಾಸ್ ಸ್ಟೇಜ್ ಎಂದು ಹೇಳುತ್ತಾರೆ.ಈ ಕಾಲದಲ್ಲಿ ಹೆಂಗಸರಿಗೆ ಮನೋವಿಕಾರ ಪ್ರಾರಂಭವಾಗುತ್ತದೆ.ಎಂದು ಡಾಕ್ಟರ್ ಅದಕ್ಕೆ ಕಾರಣವನ್ನು ಈ ರೀತಿಯಾಗಿ ನೀಡುತ್ತಾರೆ."

"ನಾನ್ನಿನ್ನು ಯಾರಿಗೂ ಬೇಡವಾದವಳು. ನನ್ನ ಗಂಡನಿಗೆ ನಾನ ಬೇಕಾಗಿಲ್ಲ. ನನ್ನ ಮಕ್ಕಳು ದೊಡ್ಡವರಾದರು. ಅವರಿಗೂ ನನ್ನ ಅಗತ್ಯವಿಲ್ಲ. ನಾನು ಬದುಕಿ ಏನು ಪ್ರಯೋಜನ?" ಎನ್ನುವ ಅಭಿಪ್ರಾಯ ಮೂಡುತ್ತದೆ. ಅದೇ ರೀತಿ ಗಂಡಸರಿಗೆ 'ರಿಟೈರಾ' ಮೇಲೆ ರೋಗ ಹಿಡಿದಿರುವುದನ್ನು ಸಾವು ನಿವೃತ್ತಿ ಸಮಯದಲ್ಲಿ ಈ ಖಾಯಿಲೆ ಪ್ರಾರಂಭವಾಗುತ್ತದೆ."[೩]

ತನ್ನ ಗಂಡ ಎರಡನೆಯ ಮದುವೆಯಾದ ನಂತರ ಮನೆಯಿಂದ ಹೊರಗಟ್ಟಲ್ಪಟ್ಟು ಅನೇಕ ಹೆಂಗಸರ ಹಿಂದೆ ಬಿದ್ದು ತನ್ನನ್ನು ಸಂಪೂರ್ಣವಾಗಿ ಗಂಡನು ನಿರ್ಲಕ್ಷಿಸಿದಾಗ ಇಲ್ಲಿಗೆ ಬಂದು ಸೇರಿದ ಮತ್ತೊಬ್ಬಳು ತನ್ನ ತಂದೆ-ತಾಯಿಯರ ಕಲಹದಿಂದ ಚಿತ್ತ ಸ್ವಾಸ್ಥವನ್ನು ಕಳದುಕೊಂಡ ಇನ್ನೊಬ್ಬಳು. ಈ ಆಸ್ಪತ್ರೆಯ ಚಿತ್ರಣದ ರೋಗಿಗಳ ಮನೋವಿಕಾರದ ಮೂಲಕ ಲೇಖಕಿಯು ನಮಗೆ ತಿಳಿಸಿರುವುದು "ಹೊರಗಿನ ಪ್ರಪಂಚ ಸ್ವಲ್ಪವೇ ಸ್ವಲ್ಪ ಔದಾರ್ಯದಿಂದ ಮತ್ತು ನಿಸ್ವಾರ್ಥದಿಂದ ಇವರುಗಳೊಡನೆ ವರ್ತಿಸಿದ್ದಾರೆ. ಇವರಾರೂ ಇಲ್ಲಿಗೆ ಬರುವ ಅವಶ್ಯಕತೆಯಿರಲಿಲ್ಲ". ಎಂಬ ವಿಷಾದಕರ ಅಂಶಗಳನ್ನು ಈ ಮಾನಸಿಕ ಚಿಕಿತ್ಸಾಲಯ ಒಂದು ಪುರುಷ ಪ್ರಧಾನ ಮತ್ತು ವ್ಯಾಪಾರೀಕೃತ ಸಮಾಜದಲ್ಲಿ ಬಾಳಬೇಕಾಗಿ ಬರುವ ಸ್ತ್ರೀಯರ ಶೋಚನೀಯ ಸ್ಥಿತಿಯ ಜ್ವಲಂತ ಚಿತ್ರಣವಾಗಿದೆ.

<u>ಅಡಿ ಟಿಪ್ಪಣಿ</u>

೧ ತ್ರಿವೇಣಿ ಕೃತಿಗಳ ಒಳನೋಟ- ಸುಧಾರ್ಥಿ, ಪ್ರತಿಭಾ ಕಲಾ ಪರಿಷತ್ತು ಬೆಂಗಳೂರು-೪

೨. ತ್ರಿವೇಣಿ(ಅನಸುಯ ಶಂಕರ್) ಸಿ ಎನ್ ರಾಮಚಂದ್ರನ್ ಭಾರತೀಯ ಸಾಹಿತ್ಯ ನಿರ್ಮಾಪಕರು

೩. ಸಾಹಿತ್ಯ ಮತ್ತು ಮನೋವಿಜ್ಞಾನ-ಸಂ ಬರಗೂರು ರಾಮಚಂದ್ರಪ್ಪ, ಕರ್ನಾಟಕ ಸಾಹಿತ್ಯ ಅಕಾಡೆಮಿ

## ದೂರದ ಬೆಟ್ಟ

ತ್ರಿವೇಣಿಯವರು ಬೆಕ್ಕಿನ ಕಣ್ಣು ಎಂಬ ಯಶಸ್ವಿ ಮನೋವೈಜ್ಞಾನಿಕ ಕಾದಂಬರಿಯ ನಂತರ ದೂರದ ಬೆಟ್ಟ ಎಂಬ ಮನೋವೈಜ್ಞಾನಿಕ ಕಾದಂಬರಿಯನ್ನು ಓದುಗರ ಮುಂದಿಡುತ್ತಾರೆ. ೧೯೫೫ ರಲ್ಲಿ ದೂರದ ಬೆಟ್ಟ ಕಾದಂಬರಿಯು ಓದುಗರಿಗೆ ಲಭ್ಯವಾಯಿತು. ನಿದ್ರಾವಸ್ಥೆಯಲ್ಲಿ ನಡೆಯುವ ವ್ಯಾಧಿಯಲ್ಲಿದ್ದ (somnambulism) ಸುನಂದಳ ಸುತ್ತ ಹೆಣೆದಿರುವ ಈ ಕಾದಂಬರಿಯು ಪ್ರಾರಂಭದಲ್ಲಿ ಓದುಗರನ್ನು ಓಡಿಸಿಕೊಂಡು ಹೋಗಿ ಅಂತಿಮದಲ್ಲಿ ಮಾತ್ರ ಅದು ಒಂದು ಮನೋವೈಜ್ಞಾನಿಕ ಕಾದಂಬರಿಯೆಂದು ತಿಳಿಯುತ್ತದೆ ಅಲ್ಲಿವರೆವಿಗೂ ಒಂದು ಸುಂದರ ಸಾಮಾಜಿಕ ಕಾದಂಬರಿಯಂತೆ ಭಾಸವಾಗುತ್ತದೆ.

ಹದಿನೆಂಟರ ಸುಂದರ ತರುಣಿ ಸುನಂದಾ ಅಣ್ಣ ಸೀತರಾಮು ತಂದೆ ಮಂಜುನಾಥರಾಯ ತಾಯಿ ಸುಂದರಮ್ಮ ಇವರುಗಳ ಮೆಚ್ಚಿನ ಮಗಳಾಗಿಳು ಶ್ರೀಮಂತರಾಗಿದ್ದ ಮಂಜುನಾಥರಾಯರು ಸುನಂದಳಿಗೆ ಯಾವುದರಲ್ಲೂ ಕೊರತೆ ಮಾಡಿರಲಿಲ್ಲ. ಮೈಸೂರಿನಲ್ಲಿ ವಾಸವಾಗಿದ್ದ ಮಂಜುನಾಥರಾಯರು ಹಾಗೂ ಸುಂದರಮ್ಮನವರ ಮಗಳು ಸುನಂದೆ ಸೀತರಾಮ ಇವಳ ಅಣ್ಣ ಕಾಲೇಜು ಮೆಟ್ಟಲು ಹತ್ತಿದ ಎರೆಡು ವರ್ಷಗಳೊಳಗೆ ಸುನಂದಳ ವಿವಾಹ ಬಿ.ಇ ಅಂತಮ ವರ್ಷ ಓದುತ್ತಿದ್ದ ಶೇಖರ್ ಎಂಬ ಸ್ಪುರದ್ರೂಪಿಯೊಡನೆ ನೇರವೇರುತ್ತದೆ. ಮದುವೆಯ ನಂತರ ವಿದ್ಯಾಭ್ಯಾಸದ ಮೇಲೆ ಉತ್ತರಭಾರತದ ಪ್ರವಾಸಕ್ಕೆ ಹೋಗಬೇಕಾಗಿ ಬರುತ್ತದೆ ಶೇಖರ್ ಅಂದು ಅವನನ್ನು ಕಳುಹಿಸಿಕೊಡುವಾಗ ಹಿಂದಿಗಿಂತ ಈ ದಿನ ಅವಳ ಅಂತರಾಳ ಏಕೋ ದುಃಖಿಸುತ್ತದೆ.

'ನಿಮ್ಮ ಆರೋಗ್ಯ ಚೆನ್ನಾಗಿ ನೋಡಿಕೊಳ್ಳಿ 'ನನ್ನನ್ನು ಮರೆಯ ಬೇಡಿ' ಎಂದು ಸುನಂದ ಒತ್ತಿ ಹೇಳುತ್ತಾಳೆ' ಈ ಮಾತುಗಳು ಮುಂದೆ ನಡೆಯುವ ಅಹಿತಕರ ಘಟನೆಯನ್ನು ಸೂಚಿಸುತ್ತದೆ. ಪ್ರವಾಸದಿಂದ ಮರಳಿದ ಶೇಖರ್ ಜ್ವರಕ್ಕೆ ತುತ್ತಾಗಿ ಬೆಂಗಳೂರಿನಲ್ಲಿ ಸಾವನ್ನುಪ್ಪುತ್ತಾನೆ.

ತನ್ನ ೧೯ನೇ ವಯಸ್ಸಿನಲ್ಲಿ ಸುನಂದ ವಿಧವೆಯ ಪಟ್ಟವನ್ನು ಹೊರುತ್ತಾಳೆ ಆಗ ತಾನೇ ವಿವಾಹವೆಂಬ ಮೆಟ್ಟಿಲನ್ನು ಏರಿದ್ದ ಸುನಂದ ಅದರ ಸುಖ ದುಃಖಗಳನ್ನು ಅನೂಭವಿಸ ಮೊದಲೇ ಅವಳ ಬಾಳು ಚಿಂತೆಯ ಗೂಡಾಗುತ್ತದೆ.

ಈ ಸಮಯದಲ್ಲಿ ಅವಳ ಮನಸ್ಸಿಗೆ ಸಮಾಧಾನ ಶಾಂತಿ ನೀಡಲೆಂದು ಮನೆಯಲ್ಲಿ ಎಲ್ಲರೂ ಸುನಂದಳ ಓದನ್ನು ಮುಂದುವರಿಸಲು ಸೂಚಿಸಿ ಕಾಲೇಜಿಗೆ ಸೇರಿಸುತ್ತಾರೆ. ಓದಿನ ಸಮಯದಲ್ಲಿ ಅಣ್ಣನ ಮಗನಾದ ದಿನಕರನ ನಗುವಿನಲ್ಲಿ ತನ್ನ ನೋವನ್ನು ಅದಷ್ಟು ಮಟ್ಟಿಗೆ ಮರೆತಿರುತ್ತಾಳೆ

ಮನೆಯಲ್ಲಿ ಎಲ್ಲಾ ಇದ್ದರೂ ಮಗಳ ಜೀವನ ಹೀಗಾಯಿತಲ್ಲ ಎಂಬ ಕೊರಗು ಅವರನ್ನು ಕಾಡುತ್ತಿತ್ತು. ಇನ್ನೂ ಸುಂದರಮ್ಮನವರಿಗೂ ಅತ್ತಿಗೆ ದಮಯಂತಿಗೂ ನೆರೆಹೊರೆಯವರು ಆರತಿ ಅಕ್ಷತೆ ಕುಂಕುಮಗಳಿಗೆ ಕರೆದರೆ ಸುನಂದಳನ್ನೂ ಬಿಟ್ಟು ಹೋಗಲು ಅವರಿಗೆ ಆಗುತ್ತೀರಲಿಲ್ಲ ಮುದ್ದಾದ ಮಗಳು ವಿಧವೆಯಾಗಿ ಮನೆಯಲ್ಲಿರುವಾಗ ನಾನು ಮಡಿಲು ತುಂಬಿಸಿಕೊಂಡು ಆರತಿ

ಅಕ್ಷತೆಗೆ ಹೋಗುವುದೇ ಎಂದು ದುಃಖಿಸುತೀದ್ದರು ಈ ನಡುವೆ ದಮಯಂತಿ ಅಣ್ಣ ಸೀತರಾಮುವಿನ ಪ್ರೀತಿ ಮಮತೆ ಅನ್ಯೂನ್ಯತೆಯನ್ನು ನೋಡಿ ಸುನಂದ ಸಂತೋಷಗೊಂಡಿದ್ದರೂ ಒಮ್ಮೆಲೇ ನನಗೆ ಆ ಸೌಭಾಗ್ಯವನ್ನು ದೇವರು ಇಲ್ಲದಂತೆ ಮಾಡಿದ ಎಂದು ದುಃಖಿಸುತ್ತಿದ್ದಳು ನನ್ನ ತಂಗಿಯ ಜೀವನ ಹೀಗಾಯಿತಲ್ಲ ಎಂದು ಸೀತರಾಮು ಕೂಡ ವ್ಯಥೆಯಿಂದಿದ್ದ ತಂಗಿಯ ಬಾಳನ್ನು ಮೊದಲಿನಂತೆ ಸುಂದರಗೊಳಿಸಬೇಕು ಎಂದು ತಂದೆ ತಾಯಿಯೊಡನೆ ಸುಂದಳ ಮರುಮದುವೆಯ ಪ್ರಸ್ತಾಪ ಮಾಡುತ್ತಾರೆ

ಒಂದು ದಿನ ದಮಯಂತಿ ಸುನಂದಳಿಗೆ ಮಲ್ಲಿಗೆಯ ದಂಡೆಯನ್ನು ಮಡಿಯಲು ನೀಡಿದಾಗ ಪ್ರತಿಸಲದಂತೆ ಅದನ್ನು ಮುಡಿಯಲು ಹೋದ ಸುನಂದ ಯಾಕೋ ಅವಳಿಗೆ ಇದ್ದಕ್ಕಿದ್ದಂತೆ ವೆಂಕಮ್ಮನವರೂ ನೆನಪಾಗುತ್ತಾರೆ. ವೆಂಕಪ್ಪ ಮಂಜುನಾಥರಾಯರ ಅಕ್ಕ ಆಕೆಗೆ ಚಿಕ್ಕಂದಿನಲ್ಲಿಯೇ ಪತಿ ತೀರಿ ಹೋಗಿ ಇವರ ಮನೆಯನ್ನು ಸೇರಿ ಹೋಗಿದ್ದರು. ಇಂದು ಸುನಂದ ಮಲ್ಲಗೆಯ ದಂಡೆಯನ್ನು ಹಿಡಿದಾಗ ಅವರ ನೆನಪಾಗಿ ಅದಂಡೆಯನ್ನು ಮುಡಿಯದೆ ಕೈಯಲ್ಲೆ ಹಿಡಿದಿದ್ದನ್ನು ನೋಡಿದ ದಮಯಂತಿ

'ಹೂವು ಕೈಲಿ ಯಾಕೆ ಇಟ್ಟುಕೊಂಡಿದ್ದೀರಿ ನಾನು ಮುಡಿಸಲೇ? ಎನ್ನುತ್ತಾ

ಸುನಂದಳ ಹತ್ತಿರ ಹೋಗುತ್ತಾಳೆ. ಸುನಂದ ಕನಸಿನಲ್ಲಿರುವಂತೆ ದಮಯಂತಿಯ ಕಡೆ ನೋಡಿದಳು ಕಣ್ಣಿನಲ್ಲಿ ನೀರು ತುಂಬಿಕೊಂಡಿದ್ದರಿಂದ ದಮಯಂತಿಯ ಮುಖ ಅವಳಿಗೆ ಮಸುಕಾಗಿ ಕಾಣಿಸಿತು. ಸುನಂದ ಏನೋ ನೆನಪಾದವಳಂತೆ ಹೇಳಿದಳು,

'ನನಗೆ ಬೇಡ ದಮಯಂತಿ'.

ದಮಯಂತಿ ಚಕಿತಳಾದಳು! ಸುನಂದ ಒಂದು ದಿನವಾದರೂ ಹಾಗೆ ಮಾತನಾಡಿರಲಿಲ್ಲ ಅವಳ ಮುಖ, ದನಿ ಹೆದರಿಕೆಯನ್ನು ಮಾಡುವಂತಿದ್ದವು.

'ನನಗೆ ಬೇಡ ಅಂದ್ಮೇಲೆ ಬೇಡ' ಎನ್ನುತ್ತಾ ಸುನಂದ ಮೇಜಿನ ಮೇಲಿದ್ದ ಶೇಖರನ ಭಾವಚಿತ್ರದ ಮೇಲೆ ದಂಡೆಯೇರಿಸದಳು'.

ಇಲ್ಲಿ ಸುನಂದಳ ಸುಪ್ತ ಮನಸ್ಸಿನಲ್ಲಿದ್ದ ವಿಚಾರಗಳು ಒಂದೊಂದಾಗಿ ಸಂದರ್ಭಗಳು ಸನ್ನಿವೇಶಗಳು ಪ್ರೊತ್ಸಾಗಿಸಿದಂತೆಲ್ಲಾ ಜಾಗೃತ ಮನಸ್ಸಿಗೆ ವರ್ಗಾಹಿಸುತ್ತಿತ್ತು. ಇಲ್ಲಿ ಸುನಂದ ಸುಪ್ತಮನಸ್ಸಿನ ಒಂದು ನೋಟವನ್ನೆ ಕಾಣುತ್ತೇವೆ. ಎಂದಿನಂತೆ ಹೂವನ್ನು ಮುಡಿಯಲು ನಿರಾಕರಿಸಿದ ಸುನಂದ ದಮಯಂತಿಯೊಡನೆ ಮಾತನಾಡಿದ ರೀತಿ ದಮಯಂತಿಯಲ್ಲಿ ಭಯ ಹುಟ್ಟಿಸುವಂತ್ತಿತ್ತು. ಸುಪ್ತ ಮನಸ್ಸು ಜಾಗೃತ ಮನಸ್ಸಾಗಿ ವರ್ತಿಸುವಿಕೆಯನ್ನು ಕಾಣಬಹುದಾಗಿದೆ.

ಸೀತಾರಾಮುವಿನ ವೃತ್ತಿ ಬಾಂಧವನಾಗಿದ್ದ ಶ್ರೀಧರನು ಸೀತರಾಮುವಿನ ಇಚ್ಚೆಯಂತೆ ಸುನಂದಳ ವಿವಾಹಕ್ಕೆ ಒಪ್ಪಿ ಸುನಂದಳ ಸ್ನೇಹ ಬೆಳೆಸಲು ಮನೆಗೆ ಬರುವಿಕೆ ಹೆಚ್ಚಾಗುತ್ತಾ

ಹೋಗುತ್ತದೆ. ಸುನಂದ ಮತ್ತು ಶ್ರೀಧರರಲ್ಲಿ ಪ್ರೀತಿ ಅಂಕುರಿಸಿ ಈ ವಿಚಾರವನ್ನು ಹಿರಿಯರಿಗೆ ತಿಳಿಸಿ ಅವರ ಸಮ್ಮತಿಯನ್ನೂ ಕೂಡ ಪಡೆಯುತ್ತಾರೆ. ಅಂದಿನಿಂದ ಇವರಿಬ್ಬರ ಪ್ರೀತಿ ಇಮ್ಮಡಿಯಾಗುತ್ತದೆ.

ಒಮ್ಮೆ ಸುನಂದಳ ವಿದ್ಯಾರ್ಥಿನಿ ಒಬ್ಬಳು ತರಗತಿಯಲ್ಲಿ ಸುನಂದಳ ಚಿತ್ರವನ್ನು ಬಿಡಿಸಿದ ವಿಚಾರವನ್ನು ತನ್ನ ಮನೆಯವರಿಗೆಲ್ಲಾ ಹೇಳಿ ತನ್ನ ಸೌಂದರ್ಯಕ್ಕೆ ತಾನೇ ಹಿಗ್ಗುತ್ತಾಳೆ. ಈ ಸಮಯದಲ್ಲಿ ಅಲ್ಲಿಯೇ ಇದ್ದ ಶ್ರೀಧರನ ಪ್ರೇಮದ ನೋಟವನ್ನು ನೋಡಿ ಎದುರಿಸಲಾರದೆ ಅಳುತ್ತಾಳೆ. ಶ್ರೀಧರನೇಕೆ ನನ್ನ ಹಾಗೇ ನೋಡಬೇಕು? ಆಗ ಅವನ ನಗು ಅವಳನ್ನು ಕೇಳಿತು. ಹಾಗೆ ಕೇಳೀದರೆ ಅವಳೇನು ತಾನೇ ಹೇಳಿಯಾಳು? ಸೀತರಾಮು ಶ್ರೀಧರನನ್ನು ಬಿಟ್ಟು ಹಿಂತಿರುಗಿ ಬಂದಾಗಲೂ ಸುನಂದ ಅದೇ ರೀತಿ ನಿಂತಿದ್ದನ್ನು ನೋಡಿ

'ಸುನಂದ' ಎಂದು ಕೂಗಿದ

ಸುನಂದ ಬೆಚ್ಚಿದ್ದಳು ' ಓ ನೀನಾ'

'ಮತ್ತೇಯರಾಂತ ತಿಳಿದುಕೊಂಡಿದ್ದೆ?

....................? ಮೌನ

'ಏನೂ ಇಲ್ಲ ಅಣ್ಣ' ಎಂದು ಹೇಳಿ ಸುನಂದ ಅಣ್ಣನಿಗೆ ಮುಖ ಕಾಣಿಸ ಬಾರದೆಂದು ತಲೆ ತಗ್ಗಿಸಿ ನಿಧಾನವಾಗಿ ಮಹಡಿಯೇರಿ ಬಾಗಿಲು ಹಾಕೊಕೊಂಡು ಕೀಲು ಕಳಚಿದವಳಂತೆ ಮಂಚದ ಮೇಲೆ ಬಿದ್ದು ಆಳುತ್ತಾಳೆ.

ಈ ರೀತಿ ಹಿರಿಯರಾಗಿದ್ದೂ ಮಕ್ಕಳಂತೆ ಅಳುವುದು ಹಠಹಿಡಿಯುವುದು ಮನಶ್ಯಾಸ್ತ್ರದಲ್ಲಿ ರಕ್ಷಣತಂತ್ರಗಳಲ್ಲಿ ಬರುವ ಒಂದು ಲಕ್ಷಣವಾದ ಹಿಮ್ಮರಳುವಿಕೆ ಎಂದು ಗುರುತಿಸಲಾಗುತ್ತದೆ. ಹಿರಿಯರಾಗಿದ್ದು ಕೆಲವೊಂದು ಸಂಧರ್ಭದಲ್ಲಿ ಸಮಸ್ಯೆಗಳನ್ನು ಎದುರಿಸಲಾಗದೆ ಅಳುವುದು, ಬಯಸಿದ್ದನ್ನು ಪಡೆಯಲು ಮಕ್ಕಳಂತೆ ಹಠಹಿಡಿಯುವುದನ್ನು ಹಿಮ್ಮರಳುವಿಕೆಯಾಗಿ ರಕ್ಷಣಾತಂತ್ರದಂತೆ ಬಳಸಲಾಗುತ್ತದೆ.

ಸುನಂದೆಯು ಶ್ರೀಧರನನ್ನು ನೋಡಿ ಅವನ ಪ್ರೀತಿ ಅವಳ ಮನಸ್ಸಿಗೆ ಒಪ್ಪಿಗೆಯಿದ್ದರೂ ಅವಳ ಸುಪ್ತಮನಸ್ಸು ಅದನ್ನು ಒಪ್ಪದೆ ಅವಳನ್ನು ಗೊಂದಲಕ್ಕೆ ಗುರಿಮಾಡುತ್ತದೆ. ಈ ಗೊಂದಲದಲ್ಲಿ ಏನು ಮಾಡಬೇಕೆಂದು ತಿಳಿಯದ ಸುನಂದ ಮಕ್ಕಳಂತೆ ಬಿಕ್ಕಿ ಬಿಕ್ಕಿ ಅಳುತ್ತಾಳೆ. ಸುನಂದಳ ರೂಮಿಗೆ ಬಂದ ಸೀತರಮುವಿನ ಪುಟ್ಟ ಕಂದ ದಿನಕರನಲ್ಲಿ ತನ್ನ ದುಗುಡವನ್ನು ಹೇಳುವಿಕೆಯು ಅವಳು ತೀರಾ ನಿಸ್ಸಾಹಯಕಳು ಎಂಬುದನ್ನು ಪ್ರತಿಬಿಂಭಿಸುತ್ತದೆ.

ಆದರೂ ಅವಳ ಮನಸ್ಸು ಶ್ರೀಧರನ ಪ್ರೀತಿಯನ್ನು ಒಪ್ಪಿ ಅದನ್ನು ವ್ಯಕ್ತಪಡಿಸಿ ಶ್ರೀದರನೊಂದಿಗೆ ಸಂತೋಷದಲ್ಲಿದ್ದಳು, ಶ್ರೀಧರನ ಪ್ರೇಮದ ಗುಂಗಿನಲ್ಲಿ ಶ್ರೀಧರನು ಸಾಮಿಪ್ಯದಲ್ಲಿದ್ದಾಗ ಎಲ್ಲವನ್ನೂ ಮರೆಯುತ್ತಿದ್ದ ಸುನಂದ ಅವನು ಒಂದು ದಿನ ಮನೆಗೆ ಬಾರದಿದ್ದರೆ ಮನಸ್ಸೆಲ್ಲಾ ಅವನನ್ನೇ ಹಂಬಲಿಸುತ್ತಿತ್ತು, ಒಮ್ಮೆ ಸುನಂದಳಿರದ ಬೇಸರಗೊಂಡಿದ್ದ ಶ್ರೀಧರ ಕೆಲವು ದಿನಗಳ ಕಾಲ ಅವಳನ್ನು ನೋಡಲು ಬರುವುದಿಲ್ಲ ಇದರಿಂದ ಸುನಂದ ಅನ್ಯಮನಸ್ಕಳಾಗಿರುತ್ತಾಳೆ. ಇದೇ ಯೋಚನೆಯಲ್ಲಿ ಅವಳಿಗೆ ಯಾವುದರಲ್ಲಯೂ ಗಮನವಿರುವುದಿಲ್ಲ ಸದಾ ಶ್ರೀಧರನ ಜಪಮಾಡುತ್ತೀರುತ್ತಾಳೆ, ಶಾಲೆಯಲ್ಲಿಯೂ ಸಹ ಅವಳ ಮನಸ್ಸು ಸ್ಥಿಮಿತದಲ್ಲಿರುವುದಿಲ್ಲ 'ಭೂಗೋಳದ ಪಾಠ ಚರಿತ್ರೆಯಲ್ಲಿ ಕೊನೆಗೊಳ್ಳುತ್ತಿತ್ತು'.

ಹೀಗೆ ಅತಿಯಾಗಿ ಪ್ರೀತಿಸುತ್ತಿದ್ದ ಸುನಂದ ಶ್ರೀಧರನ ಪ್ರೀತಿಯಲ್ಲಿ ತನ್ನ ಮೊದಲ ಪತಿ ಶೇಖರನನ್ನು ಮರೆತಿರುತ್ತಾಳೆ, ತಾನು ವಿಧವೆ ಎಂಬ ವಿಚಾರವನ್ನು ಕೂಡ ಮನೆಯವರ ಪ್ರೀತಿ ಮಮತೆ ಸಲಿಗೆಗಳು ಮರೆಸಿರುತ್ತವೆ.

ಸುನಂದಳಿಗೆ ಶ್ರೀಧರೊಡನೆ ಮದುವೆ ನಿಶ್ಚಯವಾದ ಮೇಲೆ ಅವಲ ಮನಸ್ಸು ಮೊದಲಿನಂತಿರದೆ ಬೇರೊಂದು ಯೋಚನೆಯಲ್ಲಿ ತೊಡಗಿರುತ್ತಿತ್ತು

ಮೈಸೂರಿನಲ್ಲಿ ಕಾಲರಾ ತಲೆದೋರಿ ಮಂಜುನಾಥರಾಯರು ತಮ್ಮ ಮನೆಯವರೆಲ್ಲರೂ ಇನಾಕ್ಯುಲೇಷನ್ ಹಾಕಿಸಿದ್ದರು ಆದರೆ ಸುನಂದಳಿಗೆ ಶ್ರೀಧರ ಹಾಕಿಸಿಕೊಂಡಿದ್ದಾನೋ ಇಲ್ಲವೊ ಎಂಬ ಭಯದಲ್ಲಿದ್ದಳು, ಶ್ರೀಧರನಿಗೆ ಇನಾಕ್ಯುಲೇಷನ್ ವ್ಯಾಕ್ಸಿನೇಷನ್ ಬಗ್ಗೆ ನಂಬಿಕೆಯಿಲ್ಲದ್ದರಿಂದ ಉದಾಸೀನಮಾಡುವನು ಆಮೇಲೆ ಶ್ರೀಧರನ ಆರೋಗ್ಯದ ಗತಿಯೇನು? ತನ್ನ ಮೊದಲ ಪತಿ ಶೇಖರ ಹಿಂದೆ ಹೀಗೆ ಕಾಯಿಲೆಯಿಂದ ಸಾವನ್ನಪ್ಪಿದ ಘಟನೆ ನೆನೆನದು ಸುನಂದ ನಡುಗಿದಳು. ಶ್ರೀಧರ ಬಂದೊಡನೆ ಇನಾಕ್ಯುಲೇಷನ್ ಮಾಡಿಸಿಕೊಳ್ಳಲು ಒತ್ತಾಯ ಮಾಡುತ್ತಾಳೆ.

ಸುನಂದಳ ಪುನರ್ ವಿವಾಹದ ಸುದ್ದಿ ಮನೆಯವರೆಲ್ಲರಿಗೂ ಸಂತಸ ತಂದಿದ್ದರೆ, ಸುನಂದಳಿಗೆ ಮಾತ್ರ ಸದಾ ಚಿಂತೆಯಲ್ಲಿಯೋ ಮುಳಗಿರುತ್ತಿದ್ದಳು. ಮನೆಯವರೊಡನೆ ಮುಕ್ತವಾಗಿ ಮಾತನಾಡುವಾಗ ಯಾವುದೋ ಅವ್ಯಕ್ತ ನೋವೊಂದು ಅವಳನ್ನು ಕಾಡುತ್ತೀತ್ತು ಅದರಲ್ಲಿ ಅವಳು ತನ್ನನ್ನು ತಾನೇ ಮರೆಯುತ್ತಿದ್ದಳು, ತನ್ನ ರೂಮಿನಲ್ಲಿ ಏಕಾಂಗಿಯಾಗಿದ್ದಾಗ ಅವಳ ನಗು ಅಳಿಸಿ ಹೋಗುತ್ತಿತ್ತು. ಕಾರಣವಿಲ್ಲದೆ ಕಣ್ಣಿನಲ್ಲಿ ನೀರುತುಂಬಿಕೊಳ್ಳುತ್ತೀತ್ತು ಸಾವಿನ ಯೋಚನೆ ದಿನಕೊಮ್ಮೆ ಬಾರಿಯಾದರೂ ಬರುತ್ತಿತ್ತು.

ಒಂದು ಬೆಳದಿಂಗಳ ರಾತ್ರಿ ಸುನಂದ ರೂಮಿನೊಳಗೆ ಬಂದು ದೀಪ ಹಾರಿಸಿ ಹಾಸಿಗೆ ಮೇಲೆ ಉರುಳಿದಳು ಕೊಠಡಿಯ ತುಂಬೆಲ್ಲಾ ಬೆಳದಿಂಗಳು ತುಂಬಿತ್ತು ರೂಮಿನಲ್ಲಿದ್ದ ಪ್ರತಿಯೊಂದು ವಸ್ತುಗಳು ಸಪಷ್ಟವಾಗಿ ಕಾಣುತ್ತಿತ್ತು.

ಕೊಠಡಿಗೆ ಹಬ್ಬಿಕೊಂಡಿದ್ದ ಮಲ್ಲಗೆಯ ಬಳ್ಳಿ, ಮೇಜಿನ ಮೇಲಿದ್ದ ಟೇಬಲ್ ಕ್ಲಾತ್ ಅದರ ಸುತ್ತಲೂ ತಾನು ಮಾಡಿದ್ದ ಕಸೂತಿ ಕೆಲಸ, ಮೇಜಿನ ಮೇಲಿದ್ದ ಶೇಖರನ ಫೋಟೊ, ಸ್ಟಾಂಡಿನ ಮೇಲೆ ತಾನು ಬಿಚ್ಚಿಟ್ಟಿದ್ದ ಸೀರೆ........ಇವೆಲ್ಲವೂ ಸ್ಪಷ್ಟವಾಗಿ ಗೋಚರಿಸುತ್ತಿದ್ದವು. ಸುನಂದಳ ಕಣ್ಣುಗಳು ಕೊಠಡಿ ತುಂಬೆಲ್ಲ ಓಡಾಡಿ ಕಣ್ಣು ಮುಚ್ಚಿಕೊಂಡವು.

ಬೆಳಗ್ಗೆ ಎದ್ದು ಸುನಂದ ಕಾಫಿ ಕುಡಿದು ಸ್ನಾನ ಮುಗಿಸಿ ರೂಮಿಗೆ ಬಂದಳು ಕಾಲು ನೋಯುತ್ತಿದ್ದರಿಂದ ನಿಂತು ತಲೆ ಬಾಚಿಕೊಳ್ಳಲಾರದೇ ಪುಟ್ಟ ಕನ್ನಡಿಯೋದನ್ನು ತೆಗೆದು ಮೇಜಿನ ಮೇಲಿರಿಸಿ ಕುರ್ಚಿಯ ಮೇಲೆ ಕುಳಿತು ತಲೆ ಬಾಚಿಕೊಳ್ಳ ತೊಡಗಿದಳು ಅರ್ಧ ಜಡೆಹಾಕಿಕೊಂಡ್ಡರಿಂದ ಅವಳಿಗೆ ರೂಮಿನಲ್ಲಿ ಏನೋ ಬರಿದಾಗಿರುವಂತೆ ಅನಿಸಿತು. ತನ್ನ ರೂಮಿನ ಸುತ್ತ ಒಮ್ಮೆ ಕಣ್ಣಾಡಿಸಿದಳು ಎಲ್ಲಾ ಸಮಾನುಗಳು ಇದ್ದ ಸ್ಥಳದಲ್ಲಿಯೇ ಇದ್ದವು ತಾನು ಸರಿಯಾಗಿ ನೋಡಿಲ್ಲ ಎಂದು ತೊರುತ್ತದೆ ಎಂದೆನಿಸಿ ಮೊದಲು ಈ ರೂಮಿನ್ನಲಿದ್ದು ಈಗ ಇಲ್ಲಿ ಏನೋ ಇಲ್ಲವಾಗಿದೆ.........

ಸುನಂದ ಮತ್ತೊಮ್ಮೆ ನೋಡಿದಳು
ಮೇಜಿನ ಮೇಲಿದ್ದ ಶೇಖರನ ಫೋಟೋ ಮಾಯವಾಗಿತ್ತು
ಸುನಂದ ತಟ್ಟನೆ ಮೇಲೆದ್ದಳು ಗಡಿ ಬಿಡಿಯಿಂದ ಸುತ್ತಲೂ ನೋಡಿದಳು ಶೇಖರನೊಡನೆ ಸುನಂದಳ ಮದುವೆಯಾದಾಗಿನಿಂದ ಆ ಫೋಟೊ ಒಂದು ದಿನವಾದರೂ ಮೇಜಿನ ಮೇಲಿಂದ ಕದಲಿರಲಿಲ್ಲ.

ಹೀಗೆ ಒಂದೊಂದಾಗಿ ಸುನಂದಳ ರೂಮಿನಿಂದ ಶೇಖರನಿಗೆ ಸಂಬಂಧಪಟ್ಟ ವಸ್ತುಗಳು ಕಣ್ಮರೆಯಾಗುತ್ತಿದ್ದವು

ಮತ್ತೊಂದು ರಾತ್ರಿ ಸೀತರಾಮು ಪುಸ್ತಕವನ್ನು ಓದುತ್ತಿದ್ದು ಇನ್ನೇನು ನಿದ್ದೆ ಹತ್ತಬೇಕು ಅಷ್ಟರಲ್ಲಿ ಹೊರಗೆ ಹೆಜ್ಜೆಯ ಸದ್ದಾದಂತಾಯಿತು ತಕ್ಷಣ ಸೀತಾರಾಮುವಿಗೆ ಎದ್ದು ಹೋಗಿ ನೋಡಬೆಕೆನಿಸಿತು ಬೆಕ್ಕಿರಬೇಕು ಎಂದುಕೊಂಡು ಸೀತರಾಮು ಮತ್ತೊಂದು ಮಗ್ಗುಲಿಗೆ ತಿರುಗಿ ನಿದ್ರಿಸಿದ. ಅಂದೇ ಸೀತಾರಾಮು ಹೊರಗೆ ಹೋಗಿ ನೋಡಿದ್ದರೆ ಸುನಂದಳು ನಿದಾಭ್ರಮಣೆಯಲ್ಲಿ ತೊಳಲಿತ್ತಿರುವುದು ಅರಿಯಬಹುದಿತ್ತು ಆದರೆ ಹಾಗಾಗುವುದಿಲ್ಲ

ಮತ್ತೊಂದು ದಿನ ಮುಂಜಾನೆ ಸುನಂದ ಕಣ್ಣು ಬಿಟ್ಟು ಗೋಡೆಯನ್ನು ನೋಡಿದಳು ಸುನಂದ ಗಾಬರಿಯಾದಳು ಹಿಂದಿನ ದಿನ ಗೋಡೆಯ ಮೇಲೆ ಕಂಗೊಳಿಸುತ್ತಿದ್ದ ತಮ್ಮ ಮದುವೆಯ ಭಾವಚಿತ್ರ ಈ ದಿನ ಅಲ್ಲಿ ಕಾಣಲಿಲ್ಲ ತನ್ನ ರೂಮಿನಿಂದ ಹೀಗೆ ಒಂದೊಂದಾಗಿ ಸಾಮಾನುಗಳನ್ನು ಕದಿಯುತ್ತಿರುವವರಾದರೂ ಯಾರು? ನೆಲದ ಮೇಲೆ ನಿಂತರೆ ಪಟಕ್ಕನೆ ಸಿಕ್ಕತ್ತಿರಲಿಲ್ಲ. ಯಾರೋ ಕುರ್ಚಿ ಹಾಕಿ ಕೆಳಗಿಳಿಸ ಬೇಕು ಅದು ನಿಜವೆನ್ನುವಂತೆ ಪಟ ಹಾಕಿದ್ದ ಕಡೆ ಕುರ್ಚಿಯೊಂದಿತ್ತು, ಸುನಂದ ಟ್ರಂಕು ಬೀರು ತೆಗೆದು ಎಲ್ಲಾ ಹುಡುಕಿದಳು ಏನೂ ಕಳವಾಗಿರುವುದು ತಿಳಿಯಲಿಲ್ಲ ಎಲ್ಲಾ ಇರುವಂತೆಯೆ ಇದೆ ಅನ್ನಿಸಿತು.

ದಿನಗಳು ಉರುಳಿದವು ಬಾಹ್ಯ ವರ್ತನೆಯಲ್ಲಿ ಯಾವ ಬದಲಾಣೆಯಿಲ್ಲದಿದ್ದರೂ ಅಂತರಂಗವನ್ನು ಯಾವುದೋ ಚಿಂತೆಯ ಕೀಟ ಕೊರೆದು ತಿನ್ನುತ್ತಿರುವುದರ ಅರಿವು ಸುನಂದಳಿಗಾಯಿತು ಊಟ ತಿಂಡಿ ಸೇರಿತ್ತಿರಲಿಲ್ಲ ಸ್ಕೂಲಿನ ಕೆಲಸದಲ್ಲಿಯೂ ಹಿಂದಿನ ಆಸಕ್ತಿಯಿರಲಿಲ್ಲ, ರಾತ್ರಿಯ ವೇಳೆ ನಿದ್ದೆ ಸರಿಯಾಗಿ ಬರುತ್ತಿರಲಿಲ್ಲ, ಕೆಟ್ಟ ಕನಸುಗಳು ಬಿದೆದು ಆಗಾಗ್ಗೆ ಬೆಚ್ಚಿ ಏಳುತ್ತಿದ್ದಳು ತಾನು ಮೊದಲಿನಂತಲ್ಲ ಎಂದು ಸುನಂದಳಿಗೆ ತಿಳಿಯಿತು.

ಪ್ರತಿ ಸಲದಂತೆ ರಾತ್ರಿಯಲ್ಲಿಯ ಕಳವು ಮತ್ತೆ ಮರುಕಳಿಸುತ್ತದೆ. ಒಂದು ರಾತ್ರಿ ಎಂಟು ಗಂಟೆಗೆ ಮಳೆ ಬರಲು ಮೊದಲಾಯಿತು, ಆಗ ಹಿಡಿದ ಮಳೆ ರಾತ್ರಿ ಹತ್ತು ಗಂಟೆಯಾದರೂ ನಿಲ್ಲಲಿಲ್ಲ, ಹತ್ತು ಗಂಟೆಯ ಮೇಲೆ ನಿಂತಿತು ಮಳೆ ನಿಲ್ಲುವವರೆವಿಗೂ ಯಾವುದೊ ಕಾದಂಬರಿಯನ್ನು ಓದುತ್ತಾ ಕುಳಿತಿದ್ದು ಅನಂತರ ಮಲಗಿಕೊಂಡಳು. ಬೆಳಗ್ಗೆ ಎಚ್ಚರವಾದ ಕೂಡಲೇ ಸುನಂದ ಹಾಸಿಗೆಯ ಮೇಲೆ ಯಾವುದೋ ಕಾದಂಬರಯನ್ನು ಓದುತ್ತಾ ಕುಳಿತಿದ್ದು ಅನಂತರ ಮಲಗಿಕೊಂಡಳು ಬೆಳಗ್ಗೆ ಎಚ್ಚರವಾದಗ ಕೊಡಲೇ ಸುನಂದ ಹಾಸಿಗೆಯ ಮೇಲೆ ಎದ್ದು ಕುಳಿತಳು ಅಚ್ಚರಿ ಗಾಬರಿಯಿಂದ ಅವಳ ಕಣ್ಣುಗಳು ಅಗಲವಾದವು ಕಾರಣ ಸ್ವಚ್ಚವಾಗಿ ನಿರ್ಮಲವಾಗಿದ್ದ ಬಿಳಿಯ ಮಗ್ಗುಲ ಹಾಸಿಗೆಯ ಮೇಲೆ ಕೆಸರಿನ ಗುರುತು! ಮಲ್ಲಿಗೆಯ ಹೂವಿನ ಹಾಗಿದ್ದ ಹಾಸಿಗೆಯು ಕೆಸರಿನಿಂದ ಕೊಳೆಯಾಗಿತ್ತು ಸುನಂದ ತನ್ನ ಕಾಲನ್ನು ನೋಡಿಕೊಂಡಳು, ಅವಳ ಕಾಲು ಮಣ್ಣಾಗಿತ್ತು.

'ತನ್ನ ಕಾಲು ಮಣ್ಣಾದುದಾರೂ ಹೇಗೆ?....ಹೇಗೆ?'

'ಸುನಂದ ತನ್ನನ್ನು ನೂರು ಬಾರಿ ಪ್ರಶ್ನಿಸಿಕೊಂಡಳು'.

ಅವಳಿಗೆ ಇದು ಭೂತದ ಕೈವಾಡವಿರಬಹುದೆಂದು ಶಂಕಿಸುತ್ತಾಳೆ ಇಲ್ಲಿ 'ಅರೇಬಿಯನ್ ನೈಟ್ಸ್, ಕತೆಗೆ ತನ್ನ ಸ್ಥತಿಯನ್ನು ಹೋಲಿಸಿಕೊಳ್ಳುತ್ತಾಳೆ. ಈ ಕಳವು ಹೇಗೆ ಆಗುತ್ತದೆ, ಇದರ ಹಿಂದಿರುವ ವ್ಯಕ್ತಿ ಯಾರು? ಎಂಬುದನ್ನು ತಿಳಿಯುವ ಕಾತರದಲ್ಲಿ ತನ್ನ ಸ್ನೇಹಿತರ ವಸುಮತಿಯ ತಂಗಿಯಾದ ಕಲ್ಯಾಣಿಯನ್ನು ಭೇಟಿಯಾಗುತ್ತಾಳೆ, ಮನಶ್ಯಾಸ್ತ್ರದ ವಿದ್ಯಾರ್ಥಿನಿಯಾಗಿದ್ದರಿಂದ ಅವಳ ಪ್ರೊಫೆಸರ್‌ಗಳ ಸಹಾಯದಿಂದ ನನಗಾಗಿರುವ ಕಾಯಿಲೆಯನ್ನು ಮನೋವ್ಯಥೆನ್ನು ಬಗೆಹರಿಸಿಕೊಳ್ಳ ಬಹುದೆಂದು ಕಲ್ಯಾಣಿಯ ಸಹಾಯದಿಂದ ಇವರ ಡಾಕ್ಟರ್ ರಂಗನಥ್‌ರವರನ್ನು ಭೇಟಿ ಮಾಡುತ್ತಾಳೆ.

ಸುನಂದ ನನಗೆ ಆಗಿರುವುದು ಮನೋವೈಕಲ್ಪವೆಂದು ಅವಳೆ ಅರಿಯುವುದು ಆಶ್ಚರ್ಯಕರವಾಗಿದೆ. ಈ ವಿಷಯವನ್ನು ಬೇರೊಬ್ಬರಿಗೆ ಹೇಳದೆ ತನ್ನಲ್ಲೇ ವಿಷಯವನ್ನು ಗೌಪ್ಯವಾಗಿಡುವುದು ತಂಬಾ ಕಷ್ಟಕರ ಆದರೆ ಇಲ್ಲಿ ಸುನಂದ ತನ್ನಲ್ಲಿ ಆಗುತ್ತರುವ ಮನಸ್ಸಿನ ಹೋರಾಟವನ್ನು ಯಾರಿಗೂ ಹೇಳುವುದೆ ಇಲ್ಲ. ಡಾಕ್ಟರ್ ಬಳಿಹೋಗಲು ಯಾರಿಂದಲೂ ಸಲಹೆಯನ್ನು ಪಡೆಯುವುದಿಲ್ಲ, ವಿದ್ಯಾವಂತೆಯಾಗಿದ್ದರೂ ಇಂತಹ ವಿಚಿತ್ರ ಘಟನೆಗಳು ಎಂತಹವರನ್ನು ಸೇಹಿತದ ಅಥವಾ ಇತರರ ಸಲಹೆ ಪಡೆಯುವಮತೆ ಯಾಚಿಸುತ್ತದೆ. ಇಲ್ಲಿ ಸುನಂದ ಹಾಗೆ ಮಾಡುವುದಿಲ್ಲ

ಡಾಕ್ಟರ್ ರಂಗನಾಥ್ರವರನ್ನು ಭೇಟಿಮಾಡಿ ತನಗಾಗುತ್ತಿರುವ ಮನಸ್ಸಿನ ಸಮಸ್ಯೆಗಳನ್ನು ಹೇಳುತ್ತಾಳೆ. ಮೊದಲು ರಂಗನಾಥರವರಿಗೆ ಇದು ಸಮಾನ್ಯ ವ್ಯಥೆಯಂತೆ ಅನಿಸಿದರೂ ಮುಂದೆ ಅವರಿಗೆ ಇದರ ಸುಳಿವು ಸಿಗುವದು ಕಷ್ಟವಾಗುತ್ತಾ ಹೋಗುತ್ತದೆ. ಮದುವೆಯಾದರೆ ಸರಿ ಹೋಗುವುದೆಂದು ಸಲಹೆ ನೀಡುತ್ತಾರೆ. ಮದುವೆ ನಿಶ್ಚಯವಾಗಿರುವ ವಿಚಾರವನ್ನು ಸುನಂದ ತಿಳಿಸಿದಾಗ ಇನ್ನು ಅಚ್ಚರಿಯಾಗುತ್ತದೆ. ಸುನಂದಳ ಮನಸ್ಸಿನ ಹಿಂದಿನ ಮತ್ತು ಈಗಿನ ವರ್ತನೆಯನ್ನು ಕೇಳಿದಾಗ ಸುನಂದಳಿಗೆ ಮೊದಲು ಸ್ವಲ್ಪವೂ ಕೋಪ ಬರುತ್ತಿರಲಿಲ್ಲ ಆದರೆ ಈಗ ಬೇಗ ಕೋಪ ಬರುತ್ತದೆ. ಒಂದೊಂದು ಸಲ ನನ್ನ ಮೇಲೆ ನನಗೆ ಕೋಪ ಬಂದು ಬಾವಿಯೊಳಗ ಬಿದ್ದು ಸತ್ತು ಹೋಗೋಣವೆನಿಸುವಂತಾಗುತ್ತದೆ. ಸಾಯುವುದಕ್ಕೆ ಬಾವಿಯೇ ಏಕಾಗಬೇಕು? ಸಾಯುವುದಕ್ಕೆ ಬೆಕಾದಷ್ಟು ಮಾರ್ಗಗಳಿವೆ ವಿಷ ಸೇವಿಸಿ ಸಾಯಬಹುದು, ನೇಣು ಹಾಕಿಕೊಳ್ಳ ಬಹುದು ಕಾರು ಬಸ್ಸಿಗೆ ಸಿಕ್ಕಿ ಸಾಯಬಹುದು. ಆದರೆ ನೀನು ಬಾವಿ ಎಂದು ಏಕೆ ಹೇಳಿದೆ?. ಡಾಕ್ಟರ್ ಪ್ರಶ್ನೆಗೆ ಸುನಂದ ಸಾಯುವುದಕ್ಕೆ ಯಾವುದಾದರೂ ಒಂದಾಗಬೇಕಲ್ಲ? ನನ್ನ ಮನಸ್ಸಿಗೆ ತೋಚಿದ್ದು ಬಾವಿ ಎಂದು ಉತ್ತರಿಸುತ್ತಾಳೆ.

ಇಲ್ಲಿ ಬಾವಿಯೇ ಎಂದು ಹೇಳುವುದಕ್ಕೂ ಅವಳ ಸುಪ್ತ ಮನಸ್ಸು ಇಲ್ಲಿ ಉತ್ತರಿಸುವಿಕೆಯನ್ನು ಗಮನಿಸ ಬಹುದು ಸುನಂದ ಮುಂದೆ ತಾನು ವರ್ತಿಸುವಿಕೆಗೂ ಇಲ್ಲಿ ನೀಡಿದ ಉತ್ತರಕ್ಕೂ ಸಂಬಂಧವಿರುವುದನ್ನು ಮುಂದಿನ ಘಟನೆಗಳು ತಿಳಿಸುತ್ತಾ ಹೋಗುತ್ತವೆ.

ಸುನಂದಳ ಕನಸಿನ ಬಗೆಗೆ ಡಾಕ್ಟರ್ ವಿಚಾರಿಸಿದಾಗ ಅವಳಿಗೆ ಬೀಳುವ ವಿಚಿತ್ರ ಕನಸುಗಳನ್ನು ಬರೆದು ತರುವಂತೆ ಸೂಚಿಸುತ್ತಾರೆ. ಅದರಂತೆ ಸುನಂದ ತನಗೆ ಪ್ರತಿದಿನ ಬೀಳುತ್ತಿದದ ವಿಚಿತ್ರ ಕನಸುಗಳನ್ನು ಬರೆದು ತರುತ್ತಾಳೆ. ಆದರೆ ಆ ಕನಸುಗಳನ್ನು ಅವಳೇ ಓದಿದಾಗ ನಗು ಬರುತ್ತದೆ. ಅಂದರೆ ಅವಳ ಕನಸುಗಳು ಹಾಗೆ ಒಂದೊಕ್ಕೊಂದು ಸಂಬಂಧವಿಲ್ಲದಂತೆ ಇರುವುದು ಕಾರಣವಾಗಿರುತ್ತದೆ.

ಸುನಂದಳಿಗೆ ಬೀದಿಯಲ್ಲಿ ಹೋಗುವಾಗ ಬೀದಿ ಜನರೆಲ್ಲಾ ನನ್ನ ಕಡೆಯೇ ನೋಡ್ತಿದ್ದಾರೆ...... ನನ್ನ ವಿಷಯವೇ ಮಾತನಾಡಿಕೊಳ್ಳುತ್ತಿದ್ದಾರೆ. ಎನ್ನಿಸುತ್ತೆ. ಆದರಿಂದಾಗಿ ಈಚೀಚೆಗೆ ನನಗೆ ಜನರೊಡನೆ ಬೆರೆಯುವುದೇ ಬೇಕಿಲ್ಲ Inferiorty Complex ಈಚೆಗೆ ಬಂದಿದೆ. ಎಂದು ಡಾಕ್ಟರ್ ಹತ್ತಿರ ತನ್ನೆಲ್ಲಾ ಮನಸ್ಸಿನ ತಳಮಳಗಳನ್ನು ಹೇಳಿಕೊಳ್ಳುತ್ತಾಳೆ.

ರೂಪಿನಲ್ಲಿ ಹಣದಲ್ಲಿ ಗುಣದಲ್ಲಿ ಯಾವುದರಲ್ಲೂ ಕಡಿಮೆಯಿಲ್ಲದ ಸುನಂದಳಿಗ ಮತ್ತೆ ಯಾವ ವಿಷಯದಲ್ಲಿ ಕೀಳಿರಿಮೆ ಅನ್ನಿಸುತ್ತದೆ ಎಂಬುದು ಪ್ರಶ್ನೆಯಾಗುತ್ತದೆ. ಸುನಂದಳನ್ನು ಪ್ರಶ್ನೋತ್ತರ ಪರೀಕ್ಷೆಯ ಮೂಲಕ ಪರೀಕ್ಷಿಸಿದಾಗ ಅವಳ ಪ್ರತಿ ಉತ್ತರದಲ್ಲೂ ಸುಳಿವು ಸಿಗುತ್ತಾ ಹೋಗುತ್ತದೆ. ಶ್ರೀಧರ ಮತ್ತು ಸುನಂದಳ ಪ್ರಿತಿಯ ಬಗೆಗೆ ಸುನಂದಳ ತಂದೆ ತಾಯಿಗೆ ನಂಬಿಕೆ ಇದೆಯೇ? ಎಂಬ ಡಾಕ್ಟರ್ ಪ್ರಶ್ನೆಗೆ ಸುನಂದಳ ಉತ್ತರ ಅವಳ ಸುಪ್ತ ಮಸನಸ್ಸನ್ನೇ ಪ್ರತಿನಿಧಿಸುತ್ತದೆ.

ನನ್ನ ತಂದೆ ತಾಯಿಗೆ ನನ್ನಲ್ಲಿ ನಂಬಿಕೆ ವಿಶ್ವಾಸವಿದೆ, ನಾವು ತರುಣರೊಡನೆ ಸಲಿಗೆಯಾಗಿ ಮಾತು ಕತೆಯಾಡಿ ಓಡಾಡಿದರೂ ಅವರು ನನ್ನಲ್ಲಿ ಅಪನಂಬಿಕೆ ತೋರಿಸುವುದಿಲ್ಲ ನನು ಎಲ್ಲೆ ಮೀರಿ ಹೋಗುವುದಿಲ್ಲ ಎನ್ನುವುದು ಅವರಿಗೆ ಚೆನ್ನಾಗಿ ಗೊತ್ತು; ಸುನಂದ ಹೆಣ್ಣಿನ ಗಂಡಿನ ಬಗೆಗೆ ಇರುವ ನಿರ್ಬಂಧಗಳೇ ಗಂಡಿಗೆ ಹೆಣ್ಣಿನ ಮೇಲೆ ಕುತೂಹಲ ಆಸಕ್ತಿಯನ್ನು ಮೂಡಿಸುತ್ತವೆ. ಅವರನ್ನು ಸಲಿಗೆಯಿಂದಿರಲು ಬಿಟ್ಟರೆ ಇಂತಹ ಸಮಸ್ಯಗಳೇ ಬರುವುದಿಲ್ಲ ಎಂದು ಅರ್ಥವಾತ್ತಾಗಿ ನುಡಿಯುತ್ತಾಳೆ. ಆದರೆ ಸುನಂದ ತನ್ನ ಮನೆಯಲ್ಲಿದ್ದ ವೆಂಕತ್ತೆಯ ಜೊತೆ ಬೆಳೆದ ವಾತವರಣ ಸುನಂದ ಶಿಕ್ಷಣ ಪಡೆದು ವಿದ್ಯಾವಂತೆಯಾದಗ ಇದ್ದ ಸುನಂದಳಿಗೂ ವ್ಯತ್ಯಾಸವಿರುತ್ತದೆ.

ವೆಂಕತ್ತೆಯು ಸದಾ ವ್ರತ ಮಡಿ ಎಂದೂ ಸಂಪೂರ್ಣವಾಗಿ ಆಧುನಿಕತೆಯಿಂದ ದೂರವಿದ್ದಳು, ಸತಿ ಸಾವಿತ್ರಿ, ದಮಯಂತಿ ಪತಿವ್ರತೆಯರ ಕತೆಗಳನ್ನೇ ಹೇಳಿ ನೀನು ಅವರಂತೆ ಆಗಬೇಕು ಎನ್ನುತ್ತಿದ್ದುದು ಸುನಂದಳ ಮನಸ್ಸಿನಲ್ಲಿ ಆಳವಾಗಿ ಬೇರೂರಿತ್ತು. ವೆಂಕತ್ತೆಯು ದೂರವಾಗಿದ್ದರೂ ವೆಂಕತ್ತೆಯ ಆಚಾರ ವಿಚಾರಗಳು ಸುನಂದಳ ಮನಸ್ಸಿನಿಂದ ದೂರವಾಗಿರುವುದಿಲ್ಲ.

ಸುನಂದಳಿಗೆ ಮತ್ತೊಮ್ಮೆ ತನ್ನ ವಜ್ರದ ಉಂಗುರವನ್ನು ಕಳೆದು ಕೊಂಡಾಗ ತಕ್ಷಣ ಡಾಕ್ಟರ್‌ರವರನ್ನು ಭೇಟಿಯಾಗುತ್ತಾಳೆ. ಡಾಕ್ಟರ್ ರಣಗನಾಥ್‌ರವರ ಹೇಳಿಕೆಯಂತೆ ತನಗೆ ಬಿದ್ದ ಕನಸುಗಳನ್ನು ಬರೆದು ತರುತ್ತಾಳೆ.

**ಕನಸು – ಒಂದು**

ಒಂದು ಬೆಟ್ಟದ ತುದಿಯಲ್ಲಿ ಒಂದು ದೇವಸ್ಥಾನ ಆದೇವಸ್ಥಾನದಲ್ಲಿರುವ ದೇವರ ಪೂಜೆಗೆ ಸುನಂದ ಕೆಂಪು ತಾವರೆಗಳನ್ನು ತೆಗೆದು ಕೊಂಡು ಬೆಟ್ಟವನ್ನು ಹತ್ತುತ್ತಿರುತ್ತಾಳೆ, ಅರ್ಧ ಬೆಟ್ಟ ಹತ್ತಿರುವಾಗಲೆ ಮಾರ್ಗದಲ್ಲಿ ಇನ್ನೊಂದು ಸಣ್ಣ ದೇವರ ಗುಡಿ ಕಾಣಿಸುತ್ತದೆ, ಈ ದೇವರಿಗೆ ಪೂಜೆ ಮಾಡಲೆಂದು ನಾಲ್ಕಾರು ತಾವರೆ ಹೂವುಗಳನ್ನು ತೆಗೆದು ದೇವರಿಗಿಡುತ್ತಾಳೆ. ಪೂಜಿಸಿದ ನಂತರ ಬುಟ್ಟಿಯ ಕಡೆ ನೋಡುತ್ತಾಳೆ. ಹೂವುಗಳು ಖಾಲಿಯಾಗಿರುತ್ತವೆ, ಎಲ್ಲಾ ಹೂವುಗಳನ್ನು ಈ ದೇವರಿಗೆ ಮುಡಿಸಿದರೆ ಬೆಟ್ಟದ ಮೇಲಿನ ದೇವರಿಗೆ ಏನು ಅರ್ಪಿಸುತ್ತೀಯಾ? ಎಂದು ತಾನೇ ಪ್ರಶ್ನಿಸಕೊಳ್ಳುತ್ತಾಳೆ. ಪುನಃ ಹೋಗಿ ಬೆಟ್ಟದ ಕೆಳಗೆ ಹೂಗಳನ್ನು ತರುವುದು ಹೊತ್ತಾಗುತ್ತದೆ. ಎಂದು ಚಿಂತಿಸಿ ಚಿಕ್ಕ ದೇವರಿಗೆ ಪೂಜೆ ಮಾಡಿದ್ದ ಹೂವುಗಳನ್ನು ಆಯ್ದುಕೊಂಡು ಬುಟ್ಟಿಗೆ ತುಂಬಿ ಮೇಲಕ್ಕೆ ಹತ್ತುತ್ತಾಳೆ, ದೇವಸ್ಥಾನದ ಬಾಗಿಲಿನಲ್ಲಿ ಮಡಿ ಹೆಂಗಸೊಬ್ಬಳು ನಿಂತು ನನ್ನ ಕಡೆ ದುರುಗುಟ್ಟುಕೊಂಡು ನೋಡುತ್ತಾ ಕಟುವಾಗಿ ಎನ್ನುತ್ತಾಳೆ.

'ಆ ದೇವರಿಗೆ ಪೂಜೆ ಮಾಡಿರುವ ಹೂವನ್ನು ಪುನಃ ಎಲ್ಲಿಗೆ ತಂದಿದ್ದೀಯ?'
'ಈ ನಿರ್ಮಾಲ್ಯ ಪುಷ್ಪ ಬೇಡ ಹೋಗಿ ಹೊಸ ಹುವು ತೆಗೆದು ಕೊಂದು ಬಾ' ಎಂದು ಗದರಿಸುತ್ತಾಳೆ.

ಆಗ ಸುನಂದಾ ಅಳುತ್ತಾ. 'ಪುನಃ ಕೆಳಗೆ ಹೋಗಿ ತರೋಕೆ ನನ್ನ ಕೈಲಾಗುವುದಿಲ್ಲ ಈ ಬೆಟ್ಟ ಹತ್ತಿ ಆಗಲೇ ನನ್ನ ಕಾಲುಗಳೆರಡು ನೋಯುತ್ತೀವೆ. ಈ ಹೂವಿನಿಂದಾನೇ ದೇವರ ಪೂಜೆ ಮಾಡುತ್ತೇನೆ'. ಎಂದಾಗ

ಆಕೆ ಕೆಂಗಣ್ಣಿನಿಂದ ನನ್ನನ್ನು ಸುಡುವಂತೆ ನೋಡಿ ನನ್ನ ಕೈಲಿದ್ದ ಬುಟ್ಟಿ ತೆಗೆದುಕೊಂಡು ನೆಲದ ಮೇಲೆ ಬಿಸಾಡುತ್ತಾಳೆ. ಆಗ ನಾನು ಬೆಚ್ಚಿ ಎದ್ದು ಕುಳಿತೆ ಎಂದು ವಿವರಿಸುತ್ತಾಳೆ.

**ಕನಸು – ಎರಡು**

ನಿಮ್ಮ ಮನೆಯ ಹಾಲ್‌ನಲ್ಲಿ ಹರಿ ಕಥೆ ನಡೆಯುತ್ತಿದ್ದೆ ಅಲ್ಲಿಯೇ ಮಡಿ ಹಂಗಸೊಬ್ಬಳು ಹೂಬತ್ತಿ ಹೊಸೆಯುತ್ತಾ ಅರ್ಧ ಕಣ್ಣು ತೆರೆದು ಕುಳಿತಿದ್ದಾಳೆ, ನಾನು ಆಕೆಯನ್ನು ಒರಗಿ ಕುಳಿತಿದ್ದೆ ಅಲ್ಲಿ ಸಾವಿತ್ರಿಯ ಕಥೆಯನ್ನು ಸ್ವಾರಸ್ಯಕರವಾಗಿ ಹೇಳುತ್ತಿದ್ದರು ಯಮಧರ್ಮರಾಯನ ಬಗೆಗೆ ಅಪಹಾಸ್ಯ ಮಾಡುತ್ತಾ ಮಾತನಾಡುತ್ತಿರುತ್ತಾರೆ ಅಲ್ಲಿಯೇ ಇದ್ದ ಹೆಂಗಸು ಆ ಮಾತನ್ನು ಕೇಳಿಸಿಕೊಂಡು ಕೆಂಡವಾಗುತ್ತಾಳೆ.

**ಕನಸು – ಮೂರು**

'ಪರಿಣೀತಾ' ಸಿನಿಮಾ ಅದರಲ್ಲಿಯಾ ಪಾತ್ರಗಳು ಸನ್ನಿವೇಶ ಕನಸಾಗಿ ಸುನಂದಳಿಗೆ ಬೀಳುತ್ತದೆ. ಲಲಿತೆ (ಮೀನಾ) ಅಶೋಕ್ (ಶೇಖರ್) ನಟಿಸಿರುವ. "ಚಿತ್ರದ ಒಂದು ಭಾಗ ನನಗೆ ಅಸಹಜವೆನಿಸುತ್ತದೆ. ಲಲಿತೆಯ ತಂಗಿ ಚಾರು ಏಳೆಂಟು ವರ್ಷದ ಹುಡುಗಿ ಬೊಂಬೆಗಳ ಮದುವೆ ಮಾಡುತ್ತಿರುತ್ತಾಳೆ ಲಲಿತೆಯ ಚಿಕ್ಕಪ್ಪ ಸಾಲದಿಂದಾಗಿ ಗಿರೀಶ್‌ನ ಜೊತೆ ಕಲ್ಕತ್ತೆಗೆ ಹೊರಟು ಹೋಗುತ್ತಾರೆ. ಕಲ್ಕತ್ತೆಗೆ ಹೋಗುವಾಗ ಚಾರು ಗಂಡು ಬೊಂಬೆ ಮರೆತು ಹೆಣ್ಣು ಬೊಂಬೆ ಮಾತ್ರ ತೆಗೆದು ಕೊಂಡು ಕಲ್ಕತ್ತೆಗೆ ಬರುತ್ತಾಳೆ. ಅನಂತರ ತನ್ನ ಮರೆವನ್ನು ಲಲಿತೆಗೆ ತಿಳಿಸಿ 'ಅಕ್ಕ ಈಗೇನು ಮಾಡಲಿ ವರ ಊರಿನಲ್ಲೆ ಉಳಿದು ಬಿಟ್ಟ' ಎನ್ನುತ್ತಾಳೆ, ಅದಕ್ಕೆ ಅಕ್ಕ 'ಬೇರೆ ಬೊಂಬೆಯೊಂದಿಗೆ ಇಲ್ಲಯೇ ಮದುವೆ ಮಾಡು' ಎಂದಾಗ ಆ ಏಳೆಂಟು ವರ್ಷದ ಹುಡುಗಿ; "ಹೆಣ್ಣಿಗೆ ಒಂದೇ ಬಾರಿ ಮದುವೆ" ಎನ್ನುತ್ತಾ ಹೊರಟು ಹೋಗುತ್ತಾಳೆ ಅಷ್ಟು ಚಿಕ್ಕ ಹುಡುಗಿ ಹಿರಿಯರ ಹಾಗೆ ಮಾತನಾಡಲು ಸಾಧ್ಯವೇ? ಕನಸಿನಲ್ಲಿ ಕಾಸು ಕೊಡದೆ ಮತ್ತೊಮ್ಮೆ 'ಪರಿಣೀತಾ' ನೋಡಿದಂತಾಯಿತು.

**ಕನಸು– ನಾಲ್ಕು**

ಸುನಂದ ಶೃಂಗರಸಿಕೊಂಡು ಹೊರಗೆ ಹೊರಟಿರುತ್ತಾಳೆ, ಅತ್ತಿಗೆ ದಮಯಂತಿ ಬಂದು ಹೊರಗೆ ಹೋಗಬೇಡ ಎಂದು ಜಗಳ ಕಾಯುತ್ತಾಳೆ ನೀವು ಹೋಗಬಹುದು ನಾನು ಮಾತ್ರ ಹೋಗಬಾರದೆ ಎಂದು ಪ್ರಶ್ನಿಸಿದಾಗ "ನನ್ನ ವಿಷಯ ಬೇರೆ ನನಗೂ ನಿನಗೂ ಹೋಲಿಸ ಬೇಡ ನಾನು ಹೋಗುವುದು ಸರಿ, ಆದರೆ ನೀನು ಹೋಗುವುದು ತಪ್ಪು ನೀನು ಎಲ್ಲಿಗೂ ಹೋಗಲೂ ಕೂಡದು" ಎಂದು ಅತ್ತಿಗೆ ಜಗಳವಾಡುತ್ತಾ ಸುನಂದಳನ್ನು ತಡೆಯುತ್ತಾಳೆ, ಅತ್ತಿಗೆಯ ಕೋಪದ ಮುಖ ಕೆದರಿದ ಧ್ವನಿ ಕೇಳಿ ನನಗೆ ಭಯವಾಗುತ್ತದೆ ಎಂದು ಕನಸನ್ನು ವಿವರಿಸುತ್ತಾಳೆ.

**ಕನಸು – ಐದು**
ನಾಲ್ಕಾರು ಜನ ದಾಂಡಿಗರು ನನ್ನನ್ನು ಬಲವಂತವಾಗಿ ಎಳೆದುಕೊಂಡು ಹೋಗುತ್ತಿರುತ್ತಾರೆ, ನಾನು ಅಳುತ್ತಾ "ನನ್ನ ಬಿಡಿ" ಎನ್ನುತ್ತೇನೆ ಆದರೆ ಅವರು ಬಿಡುವುದಿಲ್ಲ ನಿನಗೆ ತಕ್ಕ ಶಿಕ್ಷೆ ಕೊಡುತ್ತೇನೆ" ಎನ್ನುತ್ತಾ ಕುದಿಯುವ ನೀರಿನಲ್ಲಿ ನನ್ನ ಎತ್ತಿ ಹಾಕುತ್ತಾರೆ, ನಾನು ಕಿರುಚಿಕೊಂಡೆ ಎಚ್ಚರವಾಯಿತು.

**ಕನಸು – ಆರು ,ಏಳು**
ಎರಡನೇ ಕನಸಿಗೆ ಸಾಮಿಪ್ಯ ಹೊಂದಿರುವಂತೆ ಇರುವ ಈ ಕನಸಿನಲ್ಲಿಯೂ ಸಹ ಮಡಿ ಪಾತಿವ್ರತೆಯ ಅಂಶಗಳು ಸಿಗುತ್ತವೆ. "ನಮ್ಮ ಮನೆಯಲ್ಲಿ ತುಂಬ ಜನ ಸೇರಿದ್ದಾರೆ ಮಡಿ ಹೆಂಗಸೊಬ್ಬರೂ ಬಾಗಿಲ ಬಳಿ ಹೂಬತ್ತಿ ಮಾಡುತ್ತಾ ಕುಳಿತ್ತಿದ್ದಾರೆ, ನಾನು ಅವರುನ್ನೊರಗಿ ಕುಳಿತಿರುತ್ತೇನೆ. ಹರಿಕಥೆ ದಾಸರೊಬ್ಬರು ನಳ ಚರಿತ್ರೆ, ಲೋಪಮುದ್ರೆ, ಸೀತೆ ಇವರುಗಳ ಕತೆಯನ್ನು ಹೇಳುತ್ತಿರುತ್ತಾರೆ. ಮಡಿ ಹೆಂಗಸು ಆಗಾಗ್ಗೆ ನನ್ನ ಕಡೆ ನೋಡುತ್ತಾ

'ದಾಸರು ಹೇಳುವ ಕತೆಯನ್ನೇಲ್ಲಾ ಚೆನ್ನಾಗಿ ಕೇಳು ಪುಟ್ಟ ಅದರಿಂದ ಇಹಪರಹಳಲ್ಲೂ ಪುಣ್ಯ' ಎಂದು ನನ್ನ ತಲೆ ಸವರುತ್ತಾರೆ.

ಇವು ಸುನಂದಳಿಗೆ ಬಿದ್ದ ಕನಸುಗಳಾಗಿದ್ದು, ಸುನಂದ ಹೇಳಿದ ಕನಸುಗಳ ಬಗೆಗೆ ಡಾಕ್ಟರ್ ಕೇಳಿದ ಮೇಲೆ "ನಿಮ್ಮ ಮನೆಯಲ್ಲಿ ಯಾರಾದರೂ ಮಡಿ ಹೆಂಗಸಿದ್ದಾರೆಯೇ?' ಎಂದು ಪ್ರಶ್ನಿಸುತ್ತಾರೆ.

'ಇಲ್ಲ'

'ಹಿಂದೆ ಇದ್ದರೇ' ಎಮದು ವಿಚಾರಿಸಲು

ನಮ್ಮ ತಂದೆಯ ಅಕ್ಕ ವೆಂಕಮ್ಮ ಎಂಬುವರು ಚಿಕ್ಕ ವಯಸ್ಸಿನಲ್ಲಿಯೇ ಗಂಡ ತೀರಿಕೊಂಡಿದ್ದರಿಂದ ನಮ್ಮ ಮನೆಯಲ್ಲಿಯೇ ಇದ್ದಾರೆ.

ವೆಂಕತ್ತೆ ಮಡಿವಂತಿಕೆಯ ಹೆಂಗಸು ತನ್ನ ೧೨ನೇಯ ವಯಸ್ಸಿನಲ್ಲಿ ಗಂಡ ತೀರಿಕೊಂಡಾಗ ತನ್ನ ಕೂದಲನ್ನು ತೆಗಿಸುತ್ತಾಳೆ ಗಂಡನಿಲ್ಲದ ಹೆಂಗಸಿಗೆ ಕೂದಲಿರಬಾರದು ಆ ಕೂದಲಿನಿಂದ ಒಂದು ಹನಿ ನೀರು ನೆಲದ ಮೇಲೆ ಬಿದ್ದರೆ ಗಂಡನಿಗೆ ಯಮದೂತರು ನರಕ ಹಿಂಸೆ ಮಾಡುತ್ತರೆ. ಬದುಕಿರುವಾಗ ಅವರು ನನ್ನಿಂದ ಸುಖ ಅನುಭವಿಸಲಿಲ್ಲ ಸತ್ತು ಸ್ವರ್ಗದಲ್ಲಿರುವ ಪುಣ್ಯಾತ್ಮನನ್ನ ಕೂದಲಿಟ್ಟುಕೊಂಡು ನರಕಕ್ಕೆ ಕಳಿಸಲೇ ಎಂದು ಹೇಳಿ ಮಡಿಯಾಗುತ್ತಾಳೆ.

ಡಾಕ್ಟರ್‌ರ ಹೇಳಿಕೆಯಂತೆ ತನ್ನ ತಂದೆ ತಾಯಿಯಿಂದ ವೆಂಕತ್ತೆಯ ಬಗ್ಗೆ ವಿಷಯವನ್ನು ಸಂಗ್ರಯಿಸುತ್ತಾಳೆ. 'ಜಪ ತಪಗಳಲ್ಲಿ ಅವಳ ಕಾಲಮುಗಿಯುತ್ತಿತ್ತು ಪ್ರತಿ ಶನಿವಾರ ಮನೆಯಲ್ಲಿಯೇ

ಹರಿ ಕಥೆ ಇಡಿಸುತ್ತಿದ್ದು ದಾಸರೊಬ್ಬರು ಬಂದು ಹರಿಕಥೆ ಮಾಡುತ್ತಿದ್ದರು. ಇವಕ್ಕೆಲ್ಲ ಸಾಕ್ಷಿಯೆಂಬಂತೆ ಪುಟ್ಟ ಬಾಲಕಿ ನೀನು ವೆಂಕತ್ತೆಯ ಕೂಡಿ ಲೋಪಮುದ್ರೆ, ಸಾವಿತ್ರಿ ಕಥೆ, ನಳ ಚರಿತ್ರೆ, ಅಹಲ್ಯೆ, ಸೀತೆ ಅರುಂಧತಿ, ಕಬೀರ, ತುಳಸಿ ಇವರು ಕತೆಯೆಲ್ಲಾ ಎಷ್ಟು ಚೆನ್ನಾಗಿ ಅರಗಿಣಿಯಾಗಿ ಹೇಳುತ್ತಿದ್ದೆ, ವೆಂಕೂ ನಿನ್ನ ಕೂರಿಸಿಕೊಂಡು ಅವರ ಕಥೆಯೆಲ್ಲಾ ಹೇಳಿ ನೀನು ಅವರ ಹಾಗೆ ಆಗಬೇಕು ಕಂದಾ ಅನ್ನುತ್ತೀದ್ದಳು'.

ಹರಿಕಥೆಯ ಪ್ರಸಂಗ ಸುನಂದಳ ಎರೆಡು, ಆರು ಮತ್ತು ಏಳನೇ ಕನಸಿನಲ್ಲಿ ಬರುತ್ತದೆ. ಬಾಲ್ಯದಲ್ಲಿ ಹರಿಕಥೆಯನ್ನು ಹತ್ತಿರದಿಂದ ಪ್ರತಿ ಶನಿವಾರ ವೀಕ್ಷೀಸುತ್ತದ್ದ ಸುನಂದ ಮೇಲೆ ಮರೆಯದಂತೆ ಅಚ್ಚೊತ್ತಿರುತ್ತದೆ.

ಇವೆಲ್ಲ ವಿಷಯ ಸಂಗ್ರಹಣೆಯ ನಂತರ ಸುನಂದಳ ಅಣ್ಣ ಸೀತರಾಮುವನ್ನು ಬರ ಹೇಳಿ ಅವನಿಗೆ ತಂಗಿಯನ್ನು ರಾತ್ರಿಯ ವೇಳೆಯಲ್ಲಿ ಎಲ್ಲಿ ಹೋಗುತ್ತಾಳೆ? ಎಂಬುದನ್ನು ಪತ್ತೆ ಹಚ್ಚಬೇಕು ಎಂಬುದಾಗಿ ತಿಳಿಸುತ್ತಾನೆ ಅದರಂತೆಯೆ ಸೀತಾರಾಮು ಅಂದು ರಾತ್ರಿ ನಿದ್ದೆ ಮಾಡದೆ ಸುನಂದಳ ರೂಮಿನ ಕಡೆಯೇ ನೋಡುತ್ತಾ ಕುಳಿತ್ತಿರುತ್ತಾನೆ. ಯಾರೊ ಅಗುಳಿಯನ್ನು ಸರಿಸಿದ ಸದ್ದು ಕೇಳಿ ಸೀತರಾಮು ಬೆಚ್ಚಿ ಕಣ್ಣು ಬಿಟ್ಟ ಅಗುಳಿಯ ಸದ್ದು ಎಲ್ಲಾದುದು? ಯಾರೋ ಪೆಟ್ಟಿಗೆಯನ್ನು ತೆರೆದು ಮೃದುವಾಗಿ ಮುಚ್ಚಿದಂತಾಯಿತು ಸುನಂದಳ ರೂಮಿನ ಬಾಗಿಲು ನಿದಾನವಾಗಿ ಮೆಲ್ಲನೆ ತೆರದು ಕೊಂಡಿತು ರೂಮಿನಿಂದ ಯಾರೂ ಹೊರಗೆ ಬರುವರೊ ಎಂದುಕೊಂಡ ಸೀತರಾಮು ಅತ್ಯಂತ ಕುತೂಹಲದಿಂದ ಬಾಗಿಲ ಕಡೆ ನೋಡಿದ.

'ಹೊರಗೆ ಬಂದವಳೆ ಸುನಂದ!'

ಸುನಂದ ಒಂದು ಕ್ಷಣ ಬಾಗಿಲೊರಗಿ ನಿಂತಳು ಅವಳ ಕಣ್ಣುಗಳು ಅರೆತೆರೆದಿದ್ದು ಸುನಂದಳ ಕಣ್ಣು, ಮುಖವನ್ನು ನೋಡಿದರೆ ಅವಳಿಗೆ ಎಚ್ಚರವಿರುವಂತೆ ತೋರಲಿಲ್ಲ ನಿದಾವನಾಗಿ ಮೆಟ್ಟಿಲುಗಳನ್ನು ಇಳಿದಳು ಎಲ್ಲಿ ಬೀಳುವಳೊ ಎಂದು ಸೀತಾರಾಮು ಹೆದರಿದನು ಸುನಂದ ಬೀಳಲಿಲ್ಲ ಮನೆಯ ಹಿಂಭಾಗದ ಬಾಗಿಲನ್ನು ತೆಗೆದು ಕಾಂಫೌಂಡಿನೊಳಗೆ ಹೋದಳು ಅವಳ ಪಾದಗಳು ಮೃದುವಾಗಿ ಭೂಮಿಯನ್ನೇ ಮುಟ್ಟುತ್ತಾ ಮುಂದೆಮುಂದೆ ಸರಿಯುತ್ತಿದ್ದವು.

ಕಾಂಪೌಂಡಿನ ತುದಿಯಲ್ಲಿ ಮೂಲೆಯಂದರಲ್ಲಿ ಹಾಳು ಬಾವಿಯೊಂದಿತ್ತು ಮಂಜುನಾಥರಾಯರೂ ಯಾವಗಲೊ ಬಾವಿಯಂದನ್ನು ತೋಡಿಸಲು ಪ್ರಯತ್ನಿಸಿ ಫಲಕಾರಿಯಾಗದೆ ಅದನ್ನು ಕಲ್ಲು ಚಪ್ಪಡಿಹಾಕಿ ಮುಚ್ಚಿಸಿರುತ್ತಾರೆ, ಸುನಂದ ಹಾಳು ಬಾವಿಯ ಹತ್ತಿರ ನಿಂತಳು ತನ್ನ ಕೈಲಿ ಹಿಡಿದಿದ್ದ ವಸ್ತುವೊಂದನ್ನು ಬಲಗೈಲಿ ಹಿಡಿದು ಕಲ್ಲು ಚಪ್ಪಡಿಯ ಮೇಲೆ ಕಾಲಿಟ್ಟಳು.

ರಂಗನಾಥರವರು 'ಅವಳನ್ನು ಮಾತನಾಡಿಸಬಾರದು ಮುಟ್ಟಬಾರದು ಮತ್ತು ಕಾಣಿಸಿಕೊಳ್ಳದಂತೆ ಸುನಂದಳನ್ನು ಹಿಂಬಾಲಿಸ ಬೇಕು, ಎಂದು ಹೇಳಿರುತ್ತಾರೆ ಆ ಮಾತಿನಂತೆ ಸೀತಾರಾಮು ಅವಳು ಬೀಳುವಂತೆ ಇದ್ದರೂ ಹಿಡಿದುಕೊಳ್ಳದೆ ಹಿಂಬಾಲಿಸಿರುತ್ತಾರೆ. ಸುನಂದ ಚಪ್ಪಡಿಯ ಮೇಲೆ ಮೊಣಕಾಲೂರಿ ಕುಳಿತು ತನ್ನ ಕೈಯನ್ನು ಬಿರುಕಿನಲ್ಲಿ ತೂರಿಸಿದಳು ಒಂದು

ನಿಮಿಷ ಹಾಗೇಯೇ ಕುಳಿತಿದ್ದ ಸುನಂದ ನಿಂತಳು. ಹಿಂದೆ ಅವಳ ಕೈಯಲ್ಲಿದ್ದ ವಸ್ತು ಈಗ ಇಲ್ಲವಾಗಿರುತ್ತದೆ, ಕೈ ಬರಿದಾಗಿರುತ್ತದೆ, ಸುನಂದ ಮತ್ತೆ ಮನೆ ಕಡೆ ಅದೇ ಸ್ಥಿತಿಯಲ್ಲಿ ಹೊರಡುತ್ತಾಳೆ.

ಈ ಘಟನೆಯನ್ನು ಬೆಳಗ್ಗೆಯೇ ಸೀತರಾಮು ರಂಗನಾಥರವರಿಗೆ ವಿವರಿಸುತ್ತಾನೆ ರಂಗನಾಥ್ ರವರು ಸುನಂದಳನ್ನು ಕರೆಯಿಸಿ ನಿನ್ನ ಮನೋವ್ಯಥೆಗೆ ಉತ್ತರ ಸಿಕ್ಕಿತು ಎಂದು ಸಮಸ್ಯೆಗಳನ್ನು ಅದಕ್ಕೆ ಕಾರಣಗಳನ್ನು ಒಂದೊಂದಾಗಿ ಹೇಳುತ್ತಾ ಬರುತ್ತಾರೆ, ಸುನಂದಾಳಿಗೆ ಆಗ್ಗಾಗೆ ಆತ್ಮಹತ್ಯೆ ಯೋಚನೆ ಬರುವುದು ಎಳೆಯ ಮನಸ್ಸಿನಲ್ಲಿ ಬೇರೂರಿದ ಭಾವನೆಗಳನ್ನು ವಿಂದ್ಯಾವಂತೆಯಾದ ಮೇಲೆ ಬಂದ ಆಧುನಿಕ ಮನೋಭಾವಕ್ಕೆ ಘರ್ಷಣೆ ನಡೆಯುತ್ತಿದೆ. ವೆಂಕತ್ತೆಯ ಮಡಿಲಿನಲ್ಲಿ ಬೆಳೆದು ಸೀತೆ, ಸಾವಿತ್ರಿ, ನಳಚರಿತ್ರೆ, ಅಹಲ್ಯೆ ಲೋಪಮುದ್ರೆಯರ ಕಥೆ ಹೇಳಿ ಪತಿವ್ರತೆಯ ಧರ್ಮ, ಮಹಿಮೆ ಇವುಗಳಿಗೆ ಹಿರಿದಾದ ಸ್ಥಾನವನ್ನು ಕೊಟ್ಟಿರುವ ಸುನಂದಳೊಂದು ಕಡೆ, ವಿದ್ಯಾವತಿಯಾದ ಇಂದಿನ ರೀತಿ ನೀತಿಗಳನ್ನು ತಪ್ಪೆಂದು ತಿಳಿದು ವಿಧವಾ ವಿವಾಹ ಸರಿಯೆಂದು ಸಾಧಿಸುತ್ತಿರುವ ನವೀನ ಕಾಲದ ಸುನಂದ ಮತ್ತೊಂದು ಕಡೆ ಇವರಿಬ್ಬರ ನಡುವೆ ನೀನು ಸಿಕ್ಕಿ ಬಳಲುತ್ತೀರುವೆ, ನಿನ್ನ ಜಾಗೃತ ಮನಸ್ಸು ಹಳೆಯ ಭಾವನೆಗಳನ್ನು ಮೂಲೆಗೊತ್ತಿದೆ, ವೆಂಕತ್ತೆ ನಿನ್ನ ಹೃದಯದಲ್ಲಿ ಬಿತ್ತಿದ್ದ 'ಪತಿವ್ರತ' ಧರ್ಮದ ಬೀಜ ನಿನ್ನ ಅರಿವಿಲ್ಲದಂತೆ ಅಂತರಂಗದಲ್ಲಿ ಸುಪ್ತ ಮನಸ್ಸಿನಲ್ಲಿ ಆ ಮನೋಭಾವಗಳನ್ನು ಆಕ್ರಮಿಸಿ ಕೊಂಡಿದೆ.

ಹಳೆಯ ಭಾವನೆ ಹೊಸ ಭಾವನೆಗಳಿಗೆ ಹೋರಾಟವಾದಾಗ ನೀನು ಆತ್ಮಹತ್ಯೆಯ ಯೋಚನೆ ಮಾಡುತ್ತಿದ್ದೆ, ಏನು ಮಾಡವುದೆಂದು? ತೋರದೆ ದಿಕ್ಕುಕಾಣದೇ ದಾರಿತಪ್ಪಿದ ಮಗುವಿನಂತೆ ಅಸಹಾಯಕಳಾಗಿ ಅಳುತ್ತಿದೆ. ಒಮ್ಮೆ ಮದುವೆಯಾದ ಮೇಲೆ ಮರುಮದುವೆಯಾಗುವುದು ತಪ್ಪು ಎಂದು ಕೊಂಡು ಶ್ರೀಧರನ ಕೈಹಿಡಿಯಲು ನೀನು ಸಿದ್ಧಳಾಗಿದ್ದುದಕ್ಕಾಗಿ ನಿನ್ನ ಈ ಧೈರ್ಯ, ಸಾಹಸಕ್ಕೆ ನಿನಗೆ ನಿನ್ನ ಮೇಲೆ ಕೋಪ ಬರುತಿತ್ತು. ಆನರು ನಿನ್ನ ಕಡೆ ಬೆಟ್ಟು ತೋರಿಸಿ "ಇವಳು ವಿಧವೆ ಎರಡನೆಯ ಮದುವೆಯಾಗುವುದು ತಪ್ಪು ಆದರೂ ಈ ಹೆಣ್ಣು ಮರುಮದುವೆಯಾಗಲು ಹೊರಟ್ಟಿದ್ದಾಳೆ ಎಂದು ಕೊಳ್ಳುತ್ತಿರುವರೆಂದು ನಿನ್ನ ಭಾವನೆ ಜಾಗೃತ ಮನಸ್ಸಿಗೆ ತಪ್ಪಾಗಿ ಕಂಡು ಬಂದಿಲ್ಲ. ಆದರೆ ಒಳ ಮನಸ್ಸು ಅದನ್ನು ತಪ್ಪು ಎಂದು ಒಪ್ಪಿಕೊಂಡಿದೆ.

ಫ್ರಾಯ್ಡ್‌ನ ಪ್ರಕಾರ "ವ್ಯಕ್ತಿಯ ವ್ಯಕ್ತಿತ್ವದ ಮುಖ್ಯ ರೂಪುರೇಖೆಗಳು ಬಾಲ್ಯದಲ್ಲಾಗುವ ಅನುಭವಗಳಿಂದಲೇ ರೂಪಿಸಲ್ಪಡುತ್ತವೆ. ತದನಂತರ ಬೆಳವಣಿಗೆ ಬಹು ಮಟ್ಟಿಗೆ ವ್ಯಕ್ತಿತ್ವದ ಚೌಕಟ್ಟಿನಲ್ಲಿಯೇ ನಡೆಯುತ್ತದೆ ಸುಪ್ತವಾಸ್ಥೆಯಲ್ಲಿ ನಿರ್ಬಂಧಿಸಲ್ಪಟ್ಟ ವ್ಯಕ್ತಿಯ ವರ್ತನೆಯನ್ನು ಬಹಳ ಗಂಬೀರವಾಗಿಯೇ ನಿಯಂತ್ರಿಸುತ್ತವೆ.ಹಲವಾರು ವಿಧಗಳಲ್ಲಿ ಕನಸಿನಲ್ಲಿ ಹಗಲು ಕನಸಿನಲ್ಲಿ ಹಾಗೂ ಕೆಲವು ವಿಶಿಷ್ಟ ಸಂಧರ್ಭಗಳಲ್ಲಿ ಅವುಗಳನ್ನು ಉದಾತ್ತಿಕರಣ (Sublimation)ಮಾಡಲಾಗುತ್ತದೆ. 'ಕನಸು-ಮುಚ್ಚಿಟ್ಟ ಬಯಕೆಗಳ ಅನಾವರಣ' ಎಂಬ ಫ್ರಾಯ್ಡ್ ಕೇಳಿಕೆಯನ್ನು ಇಲ್ಲಿ ಸ್ಮರಿಸಬಹುದು.

ಸುನಂದಳು ರಂಗನಾಥ್‌ರವರಲ್ಲಿ ನೀಡಿದ ಕನಸುಗಳ ವಿವರಣೆಯಲ್ಲಿ ಮೊದಲ ಕನಸುನಲ್ಲಿ ಪತಿಯನ್ನೇ ದೇವರೆಂದು ಭಾವಿಸಿದ್ದೆ ನಿನ್ನ ಮೊದಲನೆಯ ಪತಿ ಶೇಖರನನ್ನು ನೀನು ನಿಜವಾಗಿಯೂ ಪ್ರೀತಿಸಿದ್ದೆ ಕೆಂಪು ತಾವರೆಯ ಹೂವು ಪೂಜೆಗೆ ಬೇಕೆ? ಬೇರೆ ಯಾವ ಹೂವು ಕನಸಿನಲ್ಲಿ ಬರಬಹುದಿತ್ತಲ್ಲವೇ?

ಹೃದಯವನ್ನು ಯಾವಾಗಲೂ ತಾವರೆ ಹೂವಿಗೆ ಹೋಲಿಸುವುದರಿಂದ 'ಹೃತ್ಕಮಲ'ಎಂದು ಹೃದಯ ಕಮಲ, ಶೇಖರನನ್ನು ನೀನು ಹೃದಯ ಪೂರ್ವಕವಾಗಿ ಪ್ರೀತಿಸುತ್ತಿದ್ದೆ ಅವನು ಸತ್ತ ನಂತರ ಶ್ರೀಧರನನ್ನು ನೀನು ಪ್ರೀತಿಸಿದೆ ಒಂದು ಬಾರಿ ಒಬ್ಬರಿಗೆ ಒಪ್ಪಿಸಿದ ಹೃದಯವನ್ನು ಮತ್ತೊಬ್ಬರಿಗೆ ಒಪ್ಪಿಸುವುದು ತಪ್ಪು ಎಂಬ ಭಾವನೆಯಿಂದಾಗಿ ಈ ರೀತಿ ಕನಸು ಬಿದ್ದಿರುತ್ತದೆ ಎಂದು ರಂಗನಾಥ್‌ರವರು ತಾವರೆ ಹೂ ಮತ್ತು ದೇವರ ಪೂಜೆಯ ಕನಸನ್ನು ಬಿಡಿಸಿ ಹೇಳುತ್ತಾರೆ.

"ಫ್ರಾಯ್ಡ್‌ನ ಪ್ರಕಾರ ಬಾಲ್ಯದಲ್ಲಾದ ಅನುಭವಗಳಿಂದ ವ್ಯಕ್ತಿತ್ವದ ರೂಪುರೇಖೆಗಳು ರೂಪಿಸಲ್ಪಡುತ್ತವೆ" ಎಂಬಂತೆ ವ್ಯಕ್ತಿಯ ಪ್ರಭಾವ ನಿನ್ನ ಮೇಲೆ ಎಷ್ಟರ ಮಟ್ಟಿಗಿದೆ ಎನ್ನುವುದನ್ನು ಎರಡನೆಯ ಕನಸು ತೋರಿಸುತ್ತದೆ.

ಮೂರನೆಯ ಕನಸಿನಲ್ಲಿ ಲಲಿತಳ ಪುಟ್ಟ ಮಗಳು ಚಾರು ಹೇಳುವ ಮಾತು ಹೆಣ್ಣಿಗೆ "ಒಂದೇ ಬಾರಿ ಮದುವೆ"ಎನ್ನುವುದು ವೆಂಕತೆ ಬೆಳೆಸಿದ ಸುನಂದಳ ಅಂತರಂಗದಲ್ಲಿ ಗುಯ್ಗುಡುತ್ತಿರುವ ಮಾತುಗಳು ಸುಪ್ತಮನಸ್ಸಿನ ಮಾತಾಗಿರುತ್ತದೆ.

ನಾಲ್ಕನೆಯ ಕನಸಿನಲ್ಲಿ ದಮಯಂತಿಯ ಸಾವಿತ್ರೆಯ ಪತಿವ್ರತೆಯ ಕತೆಗಳನ್ನು ಕೇಳುತ್ತಿದ್ದ ನೀನು ಮಾಡಿತ್ತಿರುವುದು ತಪ್ಪು ಎಂದು ನಿನ್ನ ಮಾತನ್ನು ಖಂಡಿಸಿದವಳು ನಿನ್ನ ಅತ್ತಿಗೆಯಲ್ಲ ನಿನ್ನ ಅತ್ತಿಗೆಯ ಹೆಸರಿನವಳಾಗಿ ನಿನ್ನ ಸುಪ್ತ ಮನಸ್ಸಿನಲ್ಲಿರುವ ನಳನ ಹೆಂಡತಿ ದಮಯಂತಿ. ದಮಯಂತಿಯನ್ನು ನೀನು ನೋಡಿಲ್ಲ ನೀನು ಕಂಡಿರುವ ಅರಿತಿರುವ ಅತ್ತಿಗೆಯೇ ನಿನ್ನೊಡನೆ ಕನಸಿನಲ್ಲಿ ನೀನು ಮಾಡುತ್ತಿರುವುದು ತಪ್ಪು ಎಂದು ಜಗಳವಾಡಿದ್ದಾಳೆ, ಹೆಸರಿನ ಸಾಮ್ಯದಿಂದಾಗಿ ನಿನಗೆ ಈ ಕನಸು ಬಿದ್ದಿದೆ.

ಇನ್ನ ಪತಿವ್ರತೆಯ ಕಥೆಗಳು ಪ್ರಭಾವಬೀರಿರುವುದರಿಂದ ಮತ್ತೆ ಶ್ರೀಧರನನ್ನು ಮರು ವಿವಾಹವಾಗಲು ಸುಪ್ತ ಮನಸು ಒಪ್ಪದೆ ಶ್ರೀಧರನನ್ನು ಮದುವೆಯಾದರೆ ಮುಂದೆ ನರಕದಲ್ಲಿ ಶಿಕ್ಷೆಯಾಗಬಹುದೆನೊ ಎಂದು ಮನಸ್ಸಿನ ತುಂಬಾ ಹೆದರಿಕೆಯಾಗಿದೆ. ಮೊದಲು ಎರಡು ಮತ್ತು ಆರು ಏಳನೇ ಕನಸಿನಲ್ಲಿಯ ಮಡಿವಂತಿಯ ಹೆಂಗಸು ಬೇರಾರು ಅಲ್ಲ ವೆಂಕತ್ತೆಯೇ ಆಗಿರುತ್ತಾಳೆ.
ಏಳನೆಯ ಕನಸಿನಲ್ಲಿ ವೆಂಕತ್ತೆಯ ಪ್ರಭಾವ ಹೆಚ್ಚಾಗಿರುವುದನ್ನು ಕಾಣುವುದು.

ಫೋಟೋ,ಉಂಗುರ,ಕಾಗದ ಪತ್ರಗಳ ಕಳವು ಆಗದೆ ಅವುಗಳನ್ನು ನೀನೆ ನಿದ್ದೆಯಲ್ಲಿ ತೆಗೆದುಕೊಂಡು ಹೋಗಿ ಬಾವಿಯಲ್ಲಿ ಹಾಕಿರುತ್ತೀಯ, ಈ ಹಿಂದೆ ಮೊದಲಲ್ಲಿ ಡಾಕ್ಟರ್ ಬಳಿ

ಬಂದಾಗ ನನಗೆ ಸಾಯಬೇಕೆನಿಸುತ್ತದೆ. ಬಾವಿಯಲ್ಲಿ ಬೀಳಬೇಕೆನಿಸುತ್ತದೆ ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಕೆರೆ, ನದಿ ವಿಷಸೇವನೆಯ ಮಾರ್ಗವನ್ನು ಸಾಯಲು ಹೇಳದೆ ತನ್ನ ಮನೆಯ ಹಿಂದಿರುವ ಬಾವಿಯನ್ನು ಹೇಳಲು ಅವಳ ಸುಪ್ತ ಮನಸ್ಸು ಆ ಬವಿಯ ಬಗೆಗೆ ತುಂಬಾ ಪರಿಚಯವಿದ್ದಂತೆ ತೋರುತ್ತದೆ ಹಾಗಾಗಿ ಬಾವಿಯನ್ನು ಆತ್ಮ ಹತ್ಯೆಯಲ್ಲಿ ಬಳಸುವಳಾಗಿ ಹೇಳುತ್ತಾಳೆ.

ಸುನಂದಳಿಗೆ ನಿದ್ದೆಗಣ್ಣಿನಲ್ಲಿ ಡೆಯುವಿಕೆ ಮನೋವ್ಯಥೆಯನ್ನು ಇಂಗ್ಲೀಷ್‌ನ್ನಲ್ಲಿ 'Somnambulisom' ಎಂದು ಕರೆಯುವರು ಈ ವ್ಯಕ್ತಿಗೆ ಎಚ್ಚರವಿರುವುದಿಲ್ಲ ನಿದ್ದೆಗಣ್ಣಿನಲ್ಲಿ ನಡೆಯುವವರಿಗೆ ಸಾಮಾನ್ಯವಾಗಿ ನರಗಳ ದೌರ್ಬಲ್ಯ ಅಥವಾ ತಪ್ಪಿತಸ್ಥ ಮನೋಭಾವವಿರುತ್ತದೆ. 'Guilty Complex' ಎಂದು ಮನಶ್ಶಾಸ್ತ್ರಜ್ಞರು ಹೇಳುತ್ತಾರೆ. ಇಲ್ಲಿ 'ಲೇಡಿ ಮ್ಯಾಕ್ ಬೆತ್' ನಾಟಕವನ್ನು ಉದಾಹರಣೆಗೆ ಲೇಖಕಿ ಹೇಳಿದ್ದಾರೆ.

**ಮನಶ್ಶಾಸ್ತ್ರದಲ್ಲಿ ಕಾಂಪ್ಲೆಕ್ಸ್‌ಗಳೆಂದರೆ**

ಫ್ರಾಯ್ಡ್ ಅಲೋಚನೆಯಲ್ಲಿ ಕಾಂಪ್ಲೆಕ್ಸ್‌ಗಳೆಂದರೆ ಸುಪ್ತ ಚೇತನದಲ್ಲಿ ಅದು ಅದುಮಿಕ್ಕಲ್ಪಟ್ಟಿದರೂ ಕ್ರೀಯಾ ಶೀಲತೆಯನ್ನು ಬೆಳಸಿಕೊಂಡು ವ್ಯಕ್ತಿಯ ವರ್ತನೆಯನ್ನು ಬಹಳ ಪ್ರಬಲವಾಗಿ ಸ್ವಲ್ಪಮಟ್ಟಿಗೆ ಪ್ರತ್ಯಕ್ಷವಾಗಿ ಬಹುಮಟ್ಟಿಗೆ ಪರೋಕ್ಷವಾಗಿ ನಿಯಂತ್ರಿಸುತ್ತಾರೆ. ನಿಜ ಸ್ವರೂಪದಲ್ಲಿ ಹೊರಬಿದ್ದದ ತೃಪ್ತಿಯನ್ನು ಪಡೆಯಬೇಕೆಂದು ಕಾದು ಕುಳಿತಿರುವ ಸಂಧರ್ಭದಲ್ಲಿ ಸುನಂಧಳಲ್ಲಿ ಈ ಭಾವನೆ ಹೊರ ಹಾಕುಲ್ಪಡುತ್ತದೆ. ಹೀಗಾಗಿ ಸುನಂದಳಲ್ಲಿ ತಪ್ಪಿನ ಭಾವನೆ ಕಾಣುತ್ತದೆ.

ಎಲ್ಲಾ ಸಮಸ್ಯೆಗಳನ್ನು ಪತ್ತೆ ಹಚ್ಚಿ ವಿವರಿಸಿದ ರಂಗನಾಥ್‌ರು ಸುನಂದಳಿಗೆ ಈ ಸಮಸ್ಯೆಗಳಿಂದ ಮುಕ್ತವಾಗುವ ಸಲಹೆಗಳನ್ನು ನೀಡುತ್ತಾರೆ.

ಜಾಗೃತ ಮನಸ್ಸಿಗೂ ಸುಪ್ತ ಮನಸ್ಸಿಗೂ ಭಿನ್ನಾಭಿಪ್ರಾಯ ಬಾರದಂತೆ ನೊಡಿಕೊಳ್ಳುವ ವಿಧವೆಯಾದರೂ ಮರು ಮದುವೆ ತಪ್ಪಲ್ಲ ಮುಂದೊಂದು ದಿನ ದುರ್ಬಲಗಳಿಗೆಯಲ್ಲಿ ಬಯಕೆಗೆ ಬಲಿಯಾಗಿ ಪತಿತೆ ಎನಿಸಿಕೊಳ್ಳುವುದಕ್ಕಿಂತ ಶ್ರೀಧರನ ಕೈ ಹಿಡಿದು ನ್ಯಾಯವಾದ ಮಾರ್ಗದಲ್ಲಿ ಹೆಜ್ಜೆಯಿಡುವುದು ಒಳ್ಳೆಯದು ಎಂದು ಸಲಹೆಕೊಟ್ಟು 'ಹೆದರದೆ ಮುಂದಿನ ಜನಾಂಗಕ್ಕೆ ಮೇಲ್ಪಂಕ್ತಿ ಹಾಕಿಕೊಡು ಎಂದು ಧೈರ್ಯವನ್ನು ತುಂಬುತ್ತಾರ'.

ಸಂಪ್ರಾದಾಯಗಳಲ್ಲಿ ಬೆಳೆದು ಅದನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳದೆ ಬಿಡಲು ಹೋಗದೆ ಮನಸ್ಸಿನಲ್ಲಿ ಹೋರಾಡುತ್ತಿದ್ದ ಸುನಂದಳಿಗೆ ಡಾಕ್ಟರ್ ರಂಗನಾಥ್ ರವರ ಮುಖಾಂತರ ಬಿಡುಗಡೆ ದೊರೆಯುತ್ತದೆ.

## ಮುಚ್ಚಿದ ಬಾಗಿಲು

ತ್ರಿವೇಣಿಯವರು ಬರೆದಿರುವ ನಾಲ್ಕು ಮನೋವೈಜ್ಞಾನಿಕ ಕಾದಂಬರಿಗಳಲ್ಲಿ ಮುಚ್ಚಿದ ಬಾಗಿಲು ಇವರ ೩ ನೇ ಮನೋವೈಜ್ಞಾನಿಕ ಕಾದಂಬರಿ, ೧೯೫೬ರಲ್ಲಿ ಈ ಕಾದಂಬರಿ ರೂಪು ತಳೆಯಿತು .ಒಬ್ಬ ಕಾದಂಬರಿಕಾರ ಮಾನಸಿಕ ಆಸ್ಪತ್ರೆಯಲ್ಲಿಯ ಚಿತ್ರಣವನ್ನೇ ಅಲ್ಲಿಯ ಮನೋರೋಗಿಗಳ ಸ್ಥಿತಿಯನ್ನು ಕಲ್ಪಿಸಿಕೊಂಡು ಚಿತ್ರಿಸುವುದಕ್ಕೂ ಮಾನಸಿಕ ಆಸ್ಪತ್ರೆಯಲ್ಲಿಯ ವೈದ್ಯರ ಸಲಹೆಯ ಮೇರೆಗೆ ನೇರವಾಗಿ ರೋಗಿಗಳ ಮನಸ್ಸು ಅದರಲ್ಲಿ ಹೂತಿಟ್ಟ ವ್ಯಥೆಗಳನ್ನು ವ್ಯಕ್ತಪಡಿಸುವಿಕೆಗೂ ತಂಬ ವ್ಯತ್ಯಾಸವಿದೆ.ರೋಗಿಯ ಚಿತ್ರಣವನ್ನು ಒಬ್ಬ ಮನೋವೈದ್ಯನ ಮುಖಾಂತರ ನಮಗೆ ಪ್ರಸ್ತುತ ಇಲ್ಲಿ ಪಡಿಸುವಿಕೆ ಮನೋವೈದ್ಯನೆ ನಿರೂಪಿಸುವಿಕೆ ವಿಶೇಷವಾಗಿದೆ.

ಜನ ಸಾಮಾನ್ಯರಲ್ಲಿ ಇಂದಿಗೂ ಬೇರೂರಿರುವ ಮೌಢ, ಮಾನಸಿಕ ಆಸ್ಪತ್ರೆಯೆಂದರೆ ಅಲ್ಲಿ ಹುಚ್ಚು ಹಿಡಿದವರು ಮಾತ್ರ ಹೋಗುತ್ತಾರೆ. ಅಲ್ಲಿಗೆ ಒಮ್ಮೆ ಭೇಟಿಮಾಡಿ ಬಂದರೆ ಅವರಿಗೆ ಹುಚ್ಚಿದೆ ಎಂಬ ವಿಚಾರಗಳನ್ನು ಕಾದಂಬರಿಯಲ್ಲಿ ಅನೇಕ ಪಾತ್ರಗಳ ಮೂಲಕ ತಿಳಿಸುತ್ತಾರೆ. ಆದರೆ ಅದು ಅವೈಜ್ಞಾನಿಕತೆ ಮೌಢ್ಯ, ಮಾನಸಿಕ ಆಸ್ಪತ್ರೆಯೆಂದರೆ. ಅಲ್ಲಿಗೆ ಒಮ್ಮೆ ಭೇಟಿ ಮಾಡಿ ಬಂದರೆ ಅವರಿಗೆ ಮಾನಸಿಕ ಆಸ್ಫತ್ರೆಯೂ ಕೂಡ ಇತರ ರೋಗಗಳ ಆಸ್ಪತ್ರೆಯಂತೆ ಇಲ್ಲಿ ಬರುವ ರೋಗಿಗಳಾಗಿರಬಹುದು ಆರೋಗ್ಯವಂತರಾಗಿರಬಹುದು.ಯಾರನ್ನು ಸಮಾಜ ಹೀಯಾಳಿಸಬಾರದು ಎಂಬ ಅಂಶಗಳನ್ನು ಈ ಕಾದಂಬರಿಯ ಮೂಲಕ ಮನದಟ್ಟು ಮಾಡಿದ್ದಾರೆ.

ಕಾದಂಬರಿ ಸುತ್ತ ಒಂದೇ ಕತೆ ಇರದೇ ವೈದ್ಯನಲ್ಲಿ ಬರುವ ರೋಗಿಗಳು ಅವರ ಸಮಸ್ಯೆಗಳನ್ನೇ ಅವರ ಸುತ್ತ ಎಣೆದ ಪಾತ್ರ ಸನ್ನಿವೇಶಗಳನ್ನು ಸಾದರ ಪಡಿಸುತ್ತ ಅವರ ಮನೋವೈಕಲ್ಪಕ್ಕೆ ಪರಿಹಾರವನ್ನಾ ಕಂಡು ಹಿಡಿಯುವ ವೈದ್ಯನ ಮನಶ್ಯಾಸ್ತ್ರದ ಮಾರ್ಗ ಓದುಗರನ್ನು ಆಸಕ್ತಿದಾಯಕರಾಗಿಸುತ್ತದೆ.

ಕರ್ತವ್ಯ ನಿಷ್ಠರಾದ ವೈದ್ಯರು ತಮ್ಮ ಸಂಸಾರದಲ್ಲಿಯೂ ಕೂಡ ಅಷ್ಟೆ ಪ್ರೀತಿಯನ್ನೇ ಹೊಂದಿರುವುದು ಆದರೆ ಅದನ್ನೇ ತೋರ್ಪಡಿಸದೆ ಹೆಂಡತಿ ಹೇಮಳನ್ನು ಕಾಯುಸುವಿಕೆಯು ಇಲ್ಲಿ ಇವರ ನಡುವಿನ ದಾಂಪತ್ಯ ಸಾಮರಸ್ಯವನ್ನು ಪ್ರತಿನಿಧಿಸುತ್ತದೆ.

ಕಾದಂಬರಿಯ ಪ್ರಾರಂಭದಲ್ಲಿ ವೈದ್ಯನಿಗೆ ಕನಸು ಬೀಳುವುದನ್ನು ಕಾಣುತ್ತೇವೆ.. ಕಾದಂಬರಿಯ ನಿರೂಪಕ ಮಾನಸಿಕ ಆಸ್ಫತ್ರೆ ವೈದ್ಯ 'ಜಯರಾಮು' ತನ್ನ ಮಾನಸಿಕ ಆಸ್ಫತ್ರೆಯನ್ನದೆ ಆಫೀಸ್ ಎಂದು ಹೇಳುತ್ತಾನೆ. ಇದಕ್ಕೆ ಬಾಲ್ಯದಲ್ಲಿದಂತಹ ಒಂದು ಅನುಭವ ಕಾರಣವಾಗಿರುತ್ತದೆ. "ಫ್ರಾಯ್ಡ್‌ನ ಪ್ರಕಾರ 'ವ್ಯಕ್ತಿಯ ವ್ಯಕ್ತಿತ್ವದ ಮುಖ್ಯ ರೂಪು ರೇಖೆಗಳು ಬಾಲ್ಯದಲ್ಲಾಗುವ ಅನುಭವಗಳಿಂದಲೇ ರೂಪಿಸಲ್ಪಡುತ್ತವೆ. ತದನಂತರ ಬೆಳೆವಣಿಗೆಯೂ ಬಹು ಮಟ್ಟಿಗೆ ಬಾಲ್ಯದಲ್ಲಿ ರೂಪಿಸಲ್ಪಟ್ಟಿರುವ ವ್ಯಕ್ತಿತ್ವದ ಚೌಕಟ್ಟಿನ್ನಲ್ಲಿಯೇ ನಡೆಯುತ್ತಾದೆ."[೧]

ಕಾಯಿಲೆ, ರೋಗ ಇವುಗಳಿಂದ ನರಳುತ್ತಿರುವ ರೋಗಿಗಳಿರುವ ಸ್ಥಳ ಮಾತ್ರ ಆಸ್ಪತ್ರೆ ಅಂತ ಸುತ್ತಲೂ ಔಷಧಿಯ ಸೀಸೆಗಳಿದ್ದರೆ ಅದು ಆಸ್ಪತ್ರೆಯಾಗಿತ್ತು. ನನ್ನ ಭಾವನೆಯಲ್ಲಿ ಎಂದು ವೈದ್ಯರು ಹೇಳುತ್ತಾರೆ. ಇಲ್ಲಿ ವೈದ್ಯನ ಈಗಿನ ರೂಮಿನಲ್ಲಿ ಬಣ್ಣ ಬಣ್ಣದ ನೀರಿನ ಗಾಜಿನ ಸೀಸೆಗಳಿಗೆ ಬದಲಾಗಿ ನಾಲ್ಕು ಕಡೆಗಳಲ್ಲಿಯ ಗಾಜಿನ ಬೀರುಗಳು . ಬೀರುಗಳ ತುಂಬಾ ಮ್ಯೂಸಿಯಂನಲ್ಲಿ ಇಡುವಂತಹ ಚಿತ್ರ ವಿಚಿತ್ರವಾದ ಸಾಮಾನುಗಳು, ಮಣ್ಣಿನ ಬೊಂಬೆಗಳು ಬಣ್ಣದ ಚಿತ್ರಗಳು ಎಳೆಯ ಮಕ್ಕಳು ಆಡುವಂತಹ ಆಟದ ಸಾಮಾನುಗಳು ಇದರಿಂದ ಆಸ್ಪತ್ರೆ ಎನಿಸದೆ ಆಫೀಸ್ ಎಂಬ ಭಾವನೆ ಅವರಿಗೆ ಬರುತ್ತಿತ್ತು. ಬಾಲ್ಯಾವಸ್ಥೆಯಲ್ಲದ ಈ ಭಾವನೆ ಆಳವಾಗಿ ಬೇರೂರಿದೆ ಬಾಲ್ಯದಲ್ಲಾದ ಅನುಭವಗಳು ಕೂಡ ಶಾಶ್ವತವಾಗಿರುತ್ತವೆ. ಅವು ಎಂದಿಗೂ ಬದಲಾಗುವುದಿಲ್ಲ ಎಂಬ ಮನಶ್ಯಾಸ್ತ್ರದ ಅಂಶಕ್ಕೆ ಇಲ್ಲಿ ಸಾಬಿತಾಗಿದೆ.

ಸೋಮಶೇಖರನೆಂಬ ಯುವಕನು ವೈದ್ಯರಲ್ಲಿ ಬರುವ ಪ್ರಥಮ ರೋಗಿಯಾಗಿರುತ್ತಾನೆ. ಈತನು ಸಾಮಾನ್ಯ ಯುವಕರಂತೆ ಎಲ್ಲರೊಡನೆ ಬೆರೆಯದೆ ಸದಾ ಭಯ, ನಾಚಿಕೆಯಿಂದ ಕೋಣೆಯಲ್ಲಿ ಒಂಟಿಯಾಗಿರುತ್ತಾನೆ. ಈತ ಸ್ಕೂಲಿನಲ್ಲಿ ಮೇಷ್ಟರಾಗಿದ್ದರೂ ಕ್ಲಾಸಿನಲ್ಲಿ ಸರಿಯಾಗಿ ಪಾಠ ಮಾಡದೆ ಮೇಜಿನ ಹಿಂದೆ ಮುಖ ಮರೆಸಿಕೊಂಡು ಕುಳಿತು ಬಿಡುತ್ತಿದ್ದನು. ಇಂತಹ ದೂರುಗಳೊಂದಿಗೆ ಸೋಮಶೇಖರನನ್ನು ತಂದೆ ವೈದ್ಯರ ಬಳಿ ಕರೆತಂದಿರುತ್ತಾರೆನನ್ನ ಮಗನನ್ನು ನೀವೇ ಸರಿಪಡಿಸಬೇಕೆಂದು ವೈದ್ಯರನ್ನು ಕೇಳಿಕೊಳ್ಳುತ್ತಾರೆ.

ಸೋಮಶೇಖರನನ್ನು ಗಮನಿಸಿದ ವೈದ್ಯರು ಆತನನ್ನು ಮಾತನಾಡಿಸಿದಾಗ ಆತ ಹುಡುಗಿಯಂತೆ ನಾಚಿಕೊಳ್ಳುವಿಕೆ ಎರಡು ಕೈಗಳ ಬೆರಳನ್ನು ಹೆಣೆದು ಅಂಗೈ ಉಜ್ಜಿ ಕಾಲಿನಿಂದ ನೆಲವನ್ನು ಕೆರೆದು ಅವನ ಕೆನ್ನೆಯಲ್ಲಿ ಕೆಂಪು ಛಾಯೆ ತಲೆದೋರಿ ಮಾಯವಾಗುವಿಕೆ. ಇತರರನ್ನು ದಿಟ್ಟಿಸಿ ನೋಡುವ ಗಂಡೆದೆ ಅವನಿಗಿದ್ದಂತೆ ತೋರಲ್ಲ.

"ಜೆ.ವ್ಯಾಟ್ಸನ್ ಜೆಮ್ಸ ಮತ್ತು ಡಾ. ಸ್ಕಿನ್ನರ್‌ಗಳಾದ ವರ್ತನಾ ಸಿದ್ಧಾಂತಗಳ ಅಭಿಪ್ರಾಯೆಂದರೆ ಯಾವುದನ್ನು ಆಗಲಿ ಬಾಹ್ಯ ವೀಕ್ಷಣೆಯಿಲ್ಲದೆ ಅರಿಯುವುದು ಸಾಧ್ಯವಿಲ್ಲ ಎಂಬುದು"೨

ಇಷ್ಟೆಲ್ಲಾ ಸೂಕ್ಷ್ಮವಾಗಿ ಗಮನಿಸಿದ ವೈದ್ಯರು ಸೋಮಶೇಖರನನ್ನು ಪ್ರತ್ಯೇಕವಾಗಿ ಕರೆಯಿಸಿ ಅವನೊಂದಿಗೆ ಪ್ರಶ್ನೋತ್ತರಗಳ ಮೂಲಕ ಅವನಲ್ಲಿ ಅಡಗಿರುವ ಸಮಸ್ಯೆಯನ್ನು ಹೊರಗೆಳೆಯುವ ಪ್ರಯತ್ನ ಮಾಡುತ್ತಾರೆ. ಮನಶ್ಯಾಸ್ತ್ರದಲ್ಲಿ ವ್ಯಕ್ತಿ ಪರೀಕ್ಷೆಯನ್ನು ಪ್ರಶ್ನೋತ್ತರಗಳ ಮೂಲಕವೂ ಕೂಡ ಮಾಡಲಾಗುತ್ತದೆ. ಆ ಪ್ರಯೋಗವನ್ನು ಇಲ್ಲಿ ನಡೆಸಲಾಗುತ್ತದೆ ಪ್ರಶ್ನೆಗಳ ಮೂಲಕ ಅವನನ್ನು ಕೆರಳಿಸುತ್ತಾ ಮನಸಿನಲ್ಲಿದ್ದ ಮುಖ್ಯ ಸಮಸ್ಯೆ ವೈದ್ಯರ ಮಂದೆ ಬಯಲಾಗುತ್ತದೆ. ಸೋಮುವಿನೊಂದಿಗೆ ವಿವಾಹ ಮಾಡಿಸಬೇಕೆಂದಿದ್ದ ಗಿರಿಜಾಳನ್ನು ಕೂಡ ಪ್ರಶ್ನೆಗಳ ಮೂಲಕ ಪರೀಕ್ಷಿಸಿದಾಗ ಸೋಮು ಇತ್ತಿಚೆಗಷ್ಟೆ ಹೀಗೆ ಆಗಿರುವುದು ಎಂಬುದು ತಿಳಿಯುತ್ತದೆ.

ಸೋಮುವಿಗೆ ೨೫ ವರ್ಷವಾದರೂ ಇನ್ನು ಗಡ್ಡ ಮೀಸೆ ಬಾರದೆ ಇದ್ದುದರಿಂದ ತನ್ನ ಗಂಡಸತ್ವದ ಬಗೆಗೆ ಸಂಶಯ ಬಂದು ಗಿರಿಜೆಯನ್ನು ವಿವಾಹವಾಗಲು ನಿರಾಕರಿಸಿರುತ್ತಾನೆ. ಈ

ವಿಷಯ ಅರಿತ ವೈದ್ಯರು ಒಂದು ಚೀಟಿಯಲ್ಲಿ ಅವರಿಗೆ ಪರಿಚಯವಿದ್ದ ಒಬ್ಬ ವೈದ್ಯರ ವಿಳಾಸವನ್ನು ಬರೆದುಕೊಟ್ಟರು.

'ಮುಖದಲ್ಲಿ ಕೂದಲನ್ನು ಉತ್ಪತ್ತಿ ಮಾಡುವ ಗ್ರಂಥಿಗಳು ತಮ್ಮ ಕೆಲಸ ಮಾಡದೇ ಜಡವಾಗಿದೆ. ಗ್ರಂಥಿಗಳನ್ನು ಪ್ರಚೋದಿಸಿ ತಮ್ಮ ಕೆಲಸ ಮಾಡುವಂತೆ ಮಾಡಲು ವೈದ್ಯರ ಅಗತ್ಯವಿದೆ. ನಿನಗೆ ಬೇಕಾದ ಚಿಕಿತ್ಸೆಯನ್ನು ಅವರು ಕೊಡುತ್ತಾರೆ. ಈ ಚೀಟಿಯನ್ನು ಅವರಿಗೆ ಕೊಡು ಆದರೆ ನಿನ್ನ ಅನುಮಾನ ಆಧಾರ ರಹಿತವಾದದ್ದು ಗಡ್ಡ ಮೀಸೆ ಬರದಿದ್ದರೆ ಗಂಡಸಲ್ಲ ಎಂಬುದು ನಿರ್ಧರಿಸುವುದು ತಪ್ಪು ಕಲ್ಪನೆಯೆಂದು ಪರಿಹಾರ ನೀಡುತ್ತಾನೆ' ಮುಂದೆ ಇದರಂತೆಯೆ ವೈದ್ಯರ ಚಿಕಿತ್ಸೆಯಿಂದ ಗಡ್ಡ ಮೀಸೆ ಬಂದು ಮನೋವೈಕಲ್ಪದಿಂದ ದೂರವಾಗಿ ಗಿರಿಜೆಯನ್ನು ವಿವಾಹವಾಗುತ್ತಾನೆ. ಸೋಮು ದೇಹದಲ್ಲಾದ ಒಂದು ಸಣ್ಣ ವೈಪರೀತ್ಯಕ್ಕೆ ತನ್ನ ಜೀವನವನ್ನು ಕತ್ತಲೆಯಲ್ಲಿಡಲು ಹೊರಟ್ಟಿದ್ದ ಸೋಮು ವೈದ್ಯರ ಸಲಹೆಯಂತೆ ಒಬ್ಬ ಮನುಷ್ಯನಾಗುತ್ತಾನೆ.

ಕಾದಂಬರಿಯಲ್ಲಿ ಮುಂದಿನ ರೋಗಿಯಾಗಿ ಸುಂದರ್ ರಾಜ್ ಎಂಬಾತ ಆಗಮಿಸುತ್ತಾನೆ. ಬಿ.ಇ ಅಂತಿಮ ವರ್ಷದ ವ್ಯಾಸಂಗ ಮಾಡುತ್ತಿದ್ದು ಪಾಸಾಗದೇ ಪದೇ ಪದೇ ಮಾರ್ಚ್ ಸೆಪ್ಟಂಬರ್‌ನಲ್ಲಿ ಪರೀಕ್ಷೆ ತೆಗೆದುಕೊಳ್ಳುತ್ತಿರುತ್ತಾನೆ. ಇವನ ಸಮಸ್ಯೆ "ಪರೀಕ್ಷೆಗೆ ನಾನು ಚೆನ್ನಾಗಿಯೇ ಓದಿರುತ್ತಾನೆ ವಿಷಯವನ್ನು ಗ್ರಹಿಸಿರುತ್ತೇನೆ.ನನಗೆ ಒಳ್ಳೆಯ ಜ್ಞಾಪಕ ಶಕ್ತಿಯಿಂದ ನನ್ನಲ್ಲಿ ನನಗೆ ಸಂಪೂರ್ಣ ನಂಬಿಕೆ ಇದೆ. ಆದರೆ ಪರೀಕ್ಷೆಯ ಹಾಲಿನೊಳಗೆ ಪ್ರವೇಶ ಮಾಡಿದೊಡನೆ ನನಗೆ ಎಲ್ಲವೂ ಮರೆತು ಹೋಗುತ್ತದೆ.

ಅವರು ಕೇಳುವ ಪ್ರಶ್ನೆಯೆ ಒಂದು ನಾನು ಬರೆಯುವ ಉತ್ತರ ಬೇರೆಯಾಗಿರುತ್ತದೆ. ಪರೀಕ್ಷೆ ಹಾಲಿನಿಂದ ಹೊರಗೆ ಬಂದ ಕೂಡಲೆ ನನಗೆ ಸರಿಯಾದ ಉತ್ತರಗಳು ನೆನಪಿಗೆ ಬರುತ್ತವೆ.ಹೀಗಾದರೆ ನಾನು ವಿದ್ಯಾಭ್ಯಾಸ ಮುಗಿಸುವುದು ಹೇಗೆ? ಬಡತನದಿಂದ ತೊಳಲುತ್ತಿರುವ ತಾಯಿ ತಂದೆಯನ್ನು ಸಂತಯಿಸುವುದು ಯಾವಾಗ? ಎಂದು ಸುಂದರ್ ರಾಜ್ ತನ್ನ ಸಮಸ್ಯೆಯನ್ನು ವೈದ್ಯರಲ್ಲಿ ತೋಡಿಕೊಳ್ಳುತ್ತಾನೆ.

ಆಗ ತಾನೆ ಬಡಗಿಯೊಬ್ಬ ಮರದ ೩ ಕೋಟಿಗಳನ್ನು ಮಾಡಿ ವೈದ್ಯರ ಮೇಜಿನ ಮೇಲೆ ಇಟ್ಟಿರುತ್ತಾರೆ ಅದನ್ನು ಗಮನಿಸಿದ ಸುಂದರ್ ರಾಜ್ ಗಾಂಧೀಜಿಯರ ತತ್ವಗಳಾದ ಕೆಟ್ಟದ್ದನ್ನು ನೋಡಬಾರದು, ಕೆಟ್ಟದ್ದನ್ನು ಕೇಳಬಾರದು, ಕೆಟ್ಟದ್ದನ್ನು ಮಾತನಾಡಬಾರದು ಎಂಬುದರ ಪ್ರತೀಕದಂತೆ ಮೂರು ಕೋತಿಗಳಲ್ಲಿ,ಅವನಿಗೆ ಅರಿವಿಲ್ಲದಂತೆ 'ಕೆಟ್ಟದ್ದನ್ನೇ ಕೇಳಬೇಡ' ಎಂಬುದನ್ನು ನಿದರ್ಶಿಸುವ ಕೋತಿಯನ್ನು ಕೈಗೆತ್ತಿ ಕೊಂಡನು . ಇಲ್ಲಿ ಗಮನಿಸಬೇಕಾದ ಅಂಶ ಸುಂದರ್‌ರಾಜ್ ಬೊಂಬೆಯಲ್ಲಿ ಅದೇ ಬೊಂಬೆಯನ್ನು ಆಯ್ಕೆ ಮಾಡುವುದಕ್ಕೂ ಅವನ ಸುತ್ತ ಮನಸ್ಸಿಗೂ ಇದಕ್ಕೂ ಸಂಬಂಧವಿದೆ ಎಂಬುದು ತಿಳಿಯುತ್ತದೆ.

ವೈದ್ಯ ಉಳಿದೆರಡು ಬೊಂಬೆಗಳಿಗಿಂತ ಈ ಬೊಂಬೆ ಚೆನ್ನಾಗಿದೆಯೇನು?ಎಂದು ಪ್ರಶ್ನಿಸಲು ಅವನು ಹಾಗೇನಿಲ್ಲ ಸುಮ್ಮನೆ ನೋಡಿದೆ ಕೆಟ್ಟದ್ದನ್ನೇ ಕೇಳಬಾರದು ಎಂಬ ವಾಕ್ಯ

ನುಡಿಯುತ್ತನೆ. ವೈದ್ಯನಿಗೆ ಆಶ್ಚರ್ಯವನ್ನು ಉಂಟುಮಾಡುತ್ತದೆ. ಕಂಡವರ ಮಾತು ಕೇಳಬಾರದು ಎಂದು ಕೋತಿ ಹೇಳುವುದಿಲ್ಲ, ಕೆಟ್ಟದ್ದನ್ನೇ ಕೇಳಬಾರದು ಒಂದು ಮಾತ್ರ ಹೇಳುತ್ತದೆ ಕಂಡವರ ಮಾತನ್ನು ಕೇಳುವುದರಲ್ಲಿ ನನಗೇನೂ ತಪ್ಪು ಕಾಣಲಿಲ್ಲ ಎಂದು ವೈದ್ಯರು ಹೇಳಿದಾಗ ಆಗಲೂ ಅವರು ಹೇಳುವಂತೆ ಕೇಳಬೇಕು ಎನ್ನುವಿರಾ? ಎಂದು ಉತ್ತರ ನೀಡುತ್ತಾನೆ. 

ಅವನ ಮಾನಸ ಸರೋವರದಲ್ಲಿ ಏನೇನು ತುಂಬಿದೆಯೋ ಎಂಬುದನ್ನು ವೈದ್ಯರು ಚಿಂತಿಸುತ್ತಾ ಇವನ ತಂದೆಯನ್ನು ಕರೆಯಿಸುತ್ತಾರೆ. ಅಷ್ಟೇನೂ ಶ್ರೀಮಂತರಲ್ಲದ ಇವರು ಬಿ.ಇ.ಓದಿಸಲು ಇವರ ಬಳಿ ಹಣವಿಲ್ಲದೆ ಶ್ರೀಮಂತರೊಬ್ಬರ ಮಗಳನ್ನೇ ಮಗನಿಗೆ ತರುವ ಒಪ್ಪಂದದ ಮೇಲೆ ಅವರ ಸಹಾಯ ಪಡೆದು ಮಗನ ವಿದ್ಯಾಭ್ಯಾಸವನ್ನು ಮುಂದುವರಿಸುತ್ತಾರೆ. ತನ್ನ ಕೈಹಿಡಿಯ ಬೇಕಿದ್ದ ಹುಡುಗಿ ಇಂದಿರಾಳು ಶೀಲವತಿಯಲ್ಲವೆಂಬುದನ್ನು ತಿಳಿದಿದ್ದ ಸುಂದರ್‌ರಾಜ್ ಅವಳನ್ನು ವಿವಾಹವಾಗಲು ಇಷ್ಟವಿರುವುದಿಲ್ಲ.ಆದರೆ ಇದನ್ನು ತಂದೆಗೆ ತಿಳಿಸಲಾಗದೆ, ವಿವಾಹವಾಗದಿದ್ದರೆ ಹಣ ಸಹಾಯ ಮಾಡಿರುವುದರಿಂದ ಅವರನ್ನು ವಂಚಿಸದಂತಾಗುತ್ತದೆ ಬಿ.ಇ.ಅಂತಿನ ವರ್ಷ ಪಾಸಾದರೆ ನನ್ನ ವಿವಾಹ ಶೀಲವತಿಯಲ್ಲದ ಇಂದಿರಾಳ ಜೊತೆ ನಡೆಯುತ್ತದೆ ಎಂದು ತನ್ನ ಅರಿವಿಲ್ಲದಂತೆ ಅವನ ಅಂತಃ ಪ್ರಜ್ಞೆಯ ಪ್ರಭಾವದಿಂದ ಅವನು ಪ್ರತಿಸಲ ಪರೀಕ್ಷೆಯಲ್ಲಿ ಅನುತ್ತೀರ್ಣನಾಗುತ್ತಿರುತ್ತಾನೆ.

ವೈದ್ಯರು ಸುಂದರ್‌ರಾಜ್‌ನ ಸುಪ್ತ ಮನಸ್ಸನ್ನು ಅರಿಯಲು ಹಾಗೂ ಅವನ ಮರೆವಿನ ಕಾರಣ ಅರಿಯಲು 'ಮೆಮೊರಿ ಟೆಸ್ಟ್'ನ್ನು ಕೊಡುತ್ತಾರೆ ಅದರಲ್ಲಿ ಒಂದಕ್ಕೊಂದು ಸಂಬಂಧ ಇರದ ಪದಗಳನ್ನು ಹೇಳುತ್ತಾನೆ.ಎರಡು ಬಾರಿ ಹೇಳಿದ ಮೇಲೆ ಸುಂದರ್‌ರಾಜ್‌ಗೆ ಬರೆಯಲು ಹೇಳುತ್ತಾರೆ ಇದೇ ರೀತಿಯ ಮೂರು ಟೆಸ್ಟ್‌ಗಳನ್ನು ಮಾಡುತ್ತಾರೆ.ಮೊದಲನೆಯ ಟೆಸ್ಟ್‌ನಲ್ಲಿ ವೈದ್ಯರು ಹೇಳಿದ ಎಲ್ಲಾ ಪದಗಳನ್ನು ಬರೆದಿರುತ್ತಾನೆ ಆ ಟೆಸ್ಟ್‌ನ್ನಲ್ಲಿ ಹೇಳಿದ ಪದಗಳು ಒಂದಕ್ಕೊಂದು ಸಂಬಂಧವಿಲ್ಲದ ಪದಗಳನ್ನು ನೆನಪಿನಲ್ಲಿಟ್ಟುಕೊಂಡು ಎಲ್ಲಾ ಬರೆದಿರುತ್ತಾನೆ. ಎರಡನೆ ಟೆಸ್ಟ್‌ನಲ್ಲಿ ಒಂದು ಪದಕ್ಕೂ ಮತ್ತೊಂದು ಪದಕ್ಕೂ ಸಂಬಂಧವಿರುವ ಸುಲಭ ಪದಗಳನ್ನು ಆರಿಸಿ ಹೇಳಿರುತ್ತಾರೆ. ಆದರೆ ಇವುಗಳನ್ನು ಬರೆಯಲು ಹೆಚ್ಚು ಸಮಯವನ್ನು ತೆಗೆದುಕೊಂಡು ಹಾಗೂ ಕೆಲವು ಪದಗಳನ್ನು ಬರೆಯಲು ಮರೆತಿರುತ್ತಾನೆ. ಆ ಪದಗಳು ಹುಡುಗಿ, ಮದುವೆ ಎಂಬ ಪದವನ್ನು ಬರೆಯುವುದಕ್ಕೆ ಮರೆತ್ತಿರುತ್ತಾನೆ. ಮೂರನೆಯ ಟೆಸ್ಟ್‌ನ್ನಲ್ಲಿ ಒಂದು ಪದ್ಯವನ್ನು ಹೇಳಿರುತ್ತಾರೆ ಒಂದು ಅಕ್ಷರವನ್ನು ಮರೆಯದೆ ಬರೆದಿರುತ್ತಾನೆ.

ಇದರಿಂದ ಸುಂದರರಾಜ್‌ಗೆ ಜ್ಞಾಪಕ ಶಕ್ತಿ ಚೆನ್ನಾಗಿ ಇದೆ. ಈ ಟೆಸ್ಟ್‌ನ ಮೂಲಕ ತಿಳಿಯುತ್ತದೆ ಆದರೆ ನಿಗದಿತ ಎರಡು ಪದಗಳನ್ನು ಬರೆಯಲು ಮರೆತ್ತಿರುತ್ತಾನೆ. ಅದು 'ಹುಡುಗಿ', 'ಮದುವೆ', ಇದಕ್ಕೆ ಕಾರಣವನ್ನು ತಿಳಿಯುವ ಸಲುವಾಗಿ ಅವನೊಡನೆ ಅವನ ಮದುವೆ ವಿಷಯವನ್ನು ಪ್ರಸ್ತಾಪಿಸುತ್ತಾ ತನ್ನ ಮೇಜಿನ ಎದುರಿನ ಕುರ್ಚಿಯಲ್ಲಿ ಕೂರಿಸುತ್ತಾನೆ. ಮದುವೆಯ ವಿಚಾರವನ್ನು ಕೇಳಿ ಬೇಸರದಿಂದ ಮಾತಾನಾಡುತ್ತಿದ್ದ ಸುಂದರರಾಜ್ ಮೇಜಿನ ಮೇಲೆ ಇದ್ದ ಪೆನ್ನು ತಗೆದು ಕೊಂಡು ಏನನ್ನೊ ಗೀಚುತ್ತಾ ಆ ಕಾಗದವನ್ನು ಮಾತನಾಡುತ್ತಾ ಹರಿದು ಚೂರು ಚೂರು ಮಡುತ್ತಾನೆ. ಆದರೆ ಅದರಲ್ಲಿ ಗೀಚಿದ ಪದ 'ಮದುವೆ' ಎಂಬುದು ಆಗಿರುತ್ತದೆ. ನಂತರ ಡಾಕ್ಟರ್‌ನಲ್ಲಿ ಕಾಗದ ಹರಿದ್ದಕ್ಕೆ ಕ್ಷಮೆ ಕೇಳುತ್ತಾನೆ.

ಇದನ್ನು ಗಮನಿಸುತ್ತಿದ್ದ ಡಾಕ್ಟರ್‌ಗೆ ಸುಂದರ್‌ರಾಜ್‌ನ ಮಾನಸಿಕ ವ್ಯಥೆಗೆ ಕಾರಣ ತಿಳಿಯುತ್ತದೆ. ನೀನು ಪರೀಕ್ಷೇಲಿ ಯಾಕೆ ಪಾಸಾಗುತ್ತಿಲ್ಲ ಗೊತ್ತೆ? ಎಂದು ನಿನಗೆ ಪಾಸಾಗಲು ಇಷ್ಟವಿಲ್ಲ, ಪರೀಕ್ಷೆಯಲ್ಲಿ ಪಾಸಾದ ಕೂಡಲೇ ಇಂದಿರಾನ ಮದುವೆ ಮಾಡಿಕೊಳ್ಳಬೇಕಲ್ಲ ಎಂದು ಹೆದರಿ ನೀನು ಪಾಸಾಗಲು ಪ್ರಯತ್ನಿಸುತ್ತಿಲ್ಲ ನಿನಗೆ ಇಂದಿರಾನ ಮದುವೆಯಾಗಲು ಇಷ್ಟವಿಲ್ಲವೇ? ಇಂದಿರಾ ಶೀಲವಂತೆ ಅಲ್ಲ ಎಂಬ ವಿಚಾರದಿಂದ ಇಂದಿರಾಳನ್ನು ವಿವಾಹವಾಗಲು ನಿರಾಕರಿಸಿ ಇದನ್ನು ಹೇಳಲಾರದೆ ಅವನು ಅಂತರಂಗದಲ್ಲಿ ಅದು ಸುತ್ತಾಡುತ್ತಿರುತ್ತದೆ. ವೈದ್ಯರ ಸಲಹೆ ಮೇರೆಗೆ ತಂದೆಗೆ ನಿಜ ಸ್ಥಿತಿಯನ್ನು ತಿಳಿಸಿ ಇಂದಿರಾ ಮತ್ತು ಅವರ ತಂದೆಗೆ ಸಾಲವನ್ನು ನನ್ನ ಕೆಲಸ ದೊರೆತ ಮೇಲೆ ತಿಳಿಸುತ್ತೇನೆ. ನಿನ್ನ ಶೀಲಗೆಟ್ಟ ಮಗಳನ್ನು ನಾ ಮದುವೆ ಆಗಲಾರೆ ಎಂದು ಹೇಳಿ ಮುಂದಿನ ಪರೀಕ್ಷೆಯಲ್ಲಿ ನಿರ್ಭಯದಿಂದ ಮರೆಯದೆ ಎಲ್ಲಾ ಉತ್ತರವನ್ನು ಬರೆದು ಪಾಸ್ ಆಗುತ್ತಾನೆ.

ಮುಂದೆ ವೈದ್ಯನ ಬಳಿ ಬರುವ ರೋಗಿ ತಾರಾ ತನ್ನ ಮಿತ್ರರೊಬ್ಬರ ಸಲಹೆಯ ಮೇರೆಗೆ ಹುಡುಗಿ ಈ ಹುಡುಗಿ ಬಂದಿರುತ್ತಾಳೆ. ದೇಹದಲ್ಲಿನ ದೋಷಗಳಿಂದ ಕೈಗಳು ಜಡವಾಗುತ್ತಿರುತ್ತವೆ. ಎಕ್ಸ್‌ರೇ ರೇಡಿಯಂ, ಯಾವುದೂ ಫಲಕಾರಿಯಾಗದೆ ನಿಮ್ಮಲ್ಲಿಗೆ ಕಳುಹಿಸಿರುತ್ತೇನೆ ಸ್ನೇಹಿತನ ಒಂದು ಕಾಗದದೊಂದಿಗೆ ಬಂದ ಹುಡುಗಿ ತಾರಾ, ಚಿಕ್ಕಂದಿನಲ್ಲಿ ತನ್ನ ಬಾಲ್ಯ ಸ್ನೇಹಿತೆ ಮತ್ತು ಆಕೆಯ ಅಣ್ಣನ ಸ್ನೇಹದಿಂದ ಸಂತೋಷಿಸುತ್ತಿದ್ದಳು,

ತಾರಾ ಅನೇಕ ವರ್ಷಗಳ ನಂತರ ಒಮ್ಮೆ ಲಾಲ್‌ಬಾಗ್‌ನ ಕಾರ್ಯಕ್ರಮ ವನ್ನು ವೀಕ್ಷಿಸಲು ಹೋದಾಗ ಅಲ್ಲಿ ಕಂಡ ತನ್ನ ಬಾಲ್ಯ ಸ್ನೇಹಿತ ಮುಸ್ಲಿಂ ಯುವಕ ಅಕ್ಬರ್‌ನನ್ನು ಕಂಡು ಸಂತೋಷಗೊಳ್ಳುತ್ತಾಳೆ.ಅಷ್ಟರಲ್ಲಿ ಜನಜಂಗುಳಿಯಲ್ಲಿ ಪೋಲಿಪುಂಡರು ವಿದ್ಯುತ್ ದೀಪಗಳನ್ನು ಒಡೆದು ಹಾಕುತ್ತಿದ್ದು ಹೆಣ್ಣು ಮಕ್ಕಳನ್ನು ಕತ್ತಲೆಯಲ್ಲಿ ಮಾನಭಂಗ ಮಾಡುತ್ತಿದ್ದಾರೆ ಎಂಬ ಸುದ್ದಿ ತಿಳಿಯುತ್ತದೆ ಅಕ್ಬರ್ ತಾರ ಈ ಗಲಾಟೆಯಿಂದ ತುಂಬಾ ದೂರ ಹೋಗುತ್ತಾರೆ. ಅಲ್ಲಿ ಪೋಲಿಪುಂಡರಿಂದ ತಪ್ಪಿಸಿಕೊಂಡ ತಾರ ತಾನು ಮತ್ತೆ ಒಬ್ಬ ಪೋಲಿ ಹುಡುಗನ ಜೊತೆ ಬಂದಿರುವನೆಂಬುದನ್ನು ತಿಳಿಯದಾಗುತ್ತಾಳೆ, ಅಕ್ಬರ್ ಕತ್ತಲೆಯಲ್ಲಿ ಅವಳನ್ನು ತನ್ನ ಬೆಂಕಿಯ ತುಟಿಗಳಿಂದ ಚುಂಬಿಸುತ್ತಾನೆ ಇದರಿಂದ ಭಯಭೀತಳಾದ ತಾರಾ ಅವನ ಹಿಡಿತದಿಂದ ತಪ್ಪಿಸಿಕೊಂಡು ಓಡಿ ಬರುತ್ತಾಳೆ.

ಅಂದಿನಿಂದ ತಾರಾ ತಾನು ಅಪವಿತ್ರಳೆಂದು ಭಾವಿಸಿ ನೀರನ್ನು ಪವಿತ್ರವಾದ ಗಂಗೆಯೆಂದು ಕರೆಯುತ್ತೆವೆ. ಆ ನೀರನ್ನು ಬಳಸಲು ಹಿಂಜರಿಯುತ್ತಾಳೆ ನೀರನ್ನು ಮುಟ್ಟಿದರೆ ಅವಳ ಕೈಗಳು ಮರದ ಕೊರಡಿನಂತೆ ಜಡವಾಗುತ್ತಿರುತ್ತವೆ.

ಈ ಸಮಸ್ಯೆಯನ್ನು ಅರಿಯಲು ವೈದ್ಯನು ಹರಸಾಹಸವನ್ನೇ ಮಾಡಬೇಕಾಗುತ್ತದೆ. ಆಕೆಯ ಅಣ್ಣ, ಸ್ನೇಹಿತೆ, ತಂದೆ ತಾಯಿ ಎಲ್ಲರನ್ನೂ ಪ್ರಶ್ನಿಸಲಾಗುತ್ತದೆ ಆದರೆ ಯಾವ ವಿಧದಲ್ಲೂ ಅವಳ ಸಮಸ್ಯೆಯ ಬಗೆಗೆ ಸುಳಿವು ಸಿಗುವುದಿಲ್ಲ ವಿಧಿಯಿಲ್ಲದೆ ಕೊನೆಗೆ 'ಹಿಪ್ನೋಟೈಸ್' ಮಾಡಲಾಗುತ್ತದೆ. "ವಶೀಕರಣ ವಿಧಾನವನ್ನೇ ವೈದ್ಯನು ಮೊದಲ ಹಂತದಲ್ಲಿ

ಬಳಸುವಂತಿಲ್ಲ. ಈ ವಿಧಾನವು ರೋಗಿಗಳ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುವುದರಿಂದ ರೋಗಿಗಳ ಸಮಸ್ಯೆ ಸುಲಭವಾಗಿ ಬಗೆ ಹರಿಯದೆ ಇದ್ದಾಗ ಮಾತ್ರ ಪ್ರಯೋಗಿಸಬೇಕೆಂದು ತ್ರಿವೇಣಿಯವರೆ ವೈದ್ಯನ ಮೂಲಕ ತಿಳಿಸುತ್ತಾರೆ". "ಹಿಪ್ನೊಟೈಸ್ ಎಂಬುದು ಜಾಗೃತ ಮನಸ್ಸಿನ ಎಲ್ಲೆಯನ್ನು ದಾಟುತ್ತಾ ಸುಪ್ತ ಮನಸ್ಸಿನೊಳಗೆ ಕೈಚಾಚಿ ಅಲ್ಲಿ ಚುಚ್ಚುತ್ತಿರುವ ಮುಳ್ಳನ್ನು ಹೊರಗೆಳೆಯುವ ಪ್ರಯತ್ನ" ಹಿಪ್ನೊಟೈಸ್‌ನಲ್ಲಿ ತಾರಾಳ ಈ ಗಂಭೀರ ಸಮಸ್ಯೆಗೆ ತನ್ನ ಬಾಲ್ಯದ ಅಕ್ಬರ್‌ನ ಒಂದು ಚುಂಬನವೇ ಕಾರಣವೆಂದು ತಿಳಿದಾಗ ವೈದ್ಯನು ಅವಳು ಹೊಂದಿರುವ ಅಪವಿತ್ರ ಭಾವನೆಯನ್ನು ಹೋಗಲಾಡಿಸುತ್ತಾನೆ.

ಚುಂಬನ ಒಂದು ಆಧುನಿಕ ಯುಗದಲ್ಲಿ ಫ್ಯಾಷನ್ ಆಗಿದೆ. ಅಮೇರಿಕಾ ಇಂಗ್ಲೇಂಡ್ ಅಂತ ದೇಶಗಳಲ್ಲಿ ಮುತ್ತಿಡುವುದು ಸರ್ವೆ ಸಾಮಾನ್ಯವಾಗಿದೆ. ಪ್ರೀತಿ ವಿಶ್ವಾಸವನ್ನು ವ್ಯಕ್ತ ಪಡಿಸಲು ಜನರು ಅಲ್ಲಿ ಚುಂಬಿಸುತ್ತಾರೆ. ನೀನು ಮಗುವಾಗಿದ್ದಾಗ ಎಷ್ಟೋ ಜನರು ನಿನ್ನನ್ನು ಮುಟ್ಟಿರಬಹುದು ಹಾಗೆಯೇ ಎಂದು ಇದನ್ನು ತಿಳಿದು ವರ್ತನೆಯ ಮೇಲೆ ನಿರ್ಮಲ ನೋಟವನ್ನು ಬೀರು ಅವನು ನಿನ್ನ ಕೈಗಳನ್ನು ಹಿಡಿದಿರಬಹುದು, ಆದರೆ ಅದನ್ನು ನೀನು ಮಹಾಪಾಪವೆಂದು ಎಣಿಸುವುದರಲ್ಲಿ ಯಾವ ಅರ್ಥವೂ ಇಲ್ಲ. ವೈದ್ಯ ರೋಗಿಯ ಕೈ ಹಿಡಿಯುವುದಿಲ್ಲವೇ? ಬಸ್ಸುಗಳಲ್ಲಿ ನೂಕುನುಗ್ಗಲಿನಲ್ಲಿ ಪುರುಷನ ಹಸ್ತ ಸ್ಪರ್ಶವಾಗುವುದುಲ್ಲವೇ? ನೀನು ತಪ್ಪಿತಸ್ಥಳಲ್ಲ ನೀನು ನಿರಾಪರಾಧಿ ನೀನು ಪವಿತ್ರಳು ಅಲ್ಲವೇ? ಎಂದು ಸಮಾಧಾನ ಸಂತೈಸುವಿಕೆಯೊಂದಿಗೆ ಅವಳು ಆ ತಪ್ಪು ಕಲ್ಪನೆಯನ್ನು ಹೋಗಲಾಡಿಸುತ್ತಾನೆ. ಅಂದಿನಿಂದ ತಾರಾಳು ತನ್ನ ಮನಸ್ಸಿನಲ್ಲಿಯ ಸಮಸ್ಯೆಯಿಂದ ದೂರವಾಗಿ ಹಗುರವಾದ ಮನಸ್ಸಿನಿಂದ ಹಾರಾಡುವ ಹಕ್ಕಿಯಂತಾಗುತ್ತಾಳೆ.

ವೈದ್ಯನು  ತಾರಾಳ ಸಮಸ್ಯೆಯನ್ನೆ ಬಗೆಹರಿಸುವಲ್ಲಿ ವ್ಯಕ್ತಿ ಪರೀಕ್ಷೆಯಂತೆ ಇದ್ದು ಪ್ರಶ್ನೋತ್ತರ ವಿಧಾನ, ವೀಕ್ಷಣಾ ಪದ್ಧತಿ ಮಾಡುತ್ತಾನೆ ಕೊನೆಯಲ್ಲಿ ವಶೀಕರಣ ಪದ್ದತಿಯಿಂದ ತಾರಾಳ ಸಮಸ್ಯೆ ಬಗೆಹರಿಯುತ್ತದೆ.

ನಂತರ ಬರುವ ರೋಗಿ ವಿಮಾನ ಕಂಪನಿಯೊಂದರಲ್ಲಿ ಇಂಜಿನಿಯರ್ ಆಗಿ ಕೆಲಸ ನಿರ್ವಹಿಸುತ್ತಿದ್ದ ಫಾರ್ನಾಂಡೀಸ್ ಮತ್ತು ಆತನ ಹೆಂಡತಿ ಇವರನ್ನು ಗಮನಿಸಿ ಮಾತಾನಾಡಿಸಿದ ವೈದ್ಯರು ರೀಟಾಳಲ್ಲಿ ಕೆಲವು ಪ್ರಶ್ನೆಗಳನ್ನೇ ಕೇಳುತ್ತಾನೆ. ನಿಮಗೆ ಕನಸುಬೀಳುತ್ತವೆಯೇ? ಹೂಂ ಎಂದು ರೀಟಾ ಹೇಳುತ್ತಾಳೆ. ಸಾಧಾರಣವಾಗಿ ಎಂತಹ ಕನಸು ಬೀಳುತ್ತದೆ ಎಂದು ಹೇಳಬಲ್ಲರಾ ?, ರೀಟಾ ಉತ್ಸುಕತೆಯಿಂದ ಕತೆಯನ್ನು ಪ್ರಾರಂಭಿಸಯತ್ತಾಳೆ. ನನಗೊಂದು ವಿಚಿತ್ರವಾದ ಕನಸು ಬೀಳುತ್ತದೆ ಡಾಕ್ಟರ್, ಸಾಧಾರಣವಾಗಿ ಎರಡು ಮೂರು ದಿನಗಳಿಗೊಂದು ಬಾರಿ ನಾನು ಈ ಕನಸನ್ನು ಕಾಣುತ್ತೇನೆ ನದಿಯ ದಂಡೆಯೊಂದರಲ್ಲಿ ನಾನು ನಿಂತಿದ್ದೇನೆ. ನದಿಯ ನೀರು ಶಾಂತವಾಗಿ ಹರಿಯುತ್ತಿದೆ ಅಪಾರವಾದ ಮರಳ ರಾಶಿಯಲ್ಲಿ ನನ್ನ ಕಾಲುಗಳನ್ನು ಹುದುಗಿಸಿ ನಾನು ಓಡಾಡುತ್ತಿದ್ದೇನೆ ನ್ನ ಕೈಲೊಂದು ಚೀಲವಿದೆ ಫಾರ್ನಾಂಡೀಸ್ ಅಲ್ಲಿಗೆ ಬರುತ್ತಾನೆ. ಇಬ್ಬರೂ ಸೇರಿ ಮರಳನಲ್ಲಿ ಹುದುಗಿಸಿದ ಸಣ್ಣ ದುಂಡುಗಲ್ಲುಗಳನ್ನು ಆಯ್ದು ಚೀಲಕ್ಕೆ ತುಂಬುತ್ತೇವೆ. ನುಣುಪಾದ ದುಂಡುಗಲ್ಲುಗಳಿಂದ ಚೀಲ ತುಂಬಿ ಭಾರವಾಗುತ್ತಲೂ ಫಾರ್ನಾಂಡೀಸ್ ಭಾರವಾಯಿತು ಚೀಲಕ್ಕೆ ತುಂಬಿದ್ದ ಕಲ್ಲುಗಳನ್ನೆಲ್ಲಾ ತೆಗೆದು ಮತ್ತೆ ಹೊರಗೆ ಎಸೆಯುತ್ತಾನೆ.

ಆದರೆ ನನಗೆ ಕಲ್ಲುಗಳನ್ನು ಬಿಸಾಡಲು ಮನಸ್ಸಿರುವುದಿಲ್ಲ ನಾನು ಫಾರ್ನಾಂಡೀಸ್‌ಗೆ ಕಲ್ಲು ಎಸೆಯಬೇಡ ಎನ್ನುತ್ತೇನೆ. ಆದರೆ ಅವನು ಕೇಳುವದಿಲ್ಲ ಚೀಲದಲ್ಲಿ ಒಂದು ಕಲ್ಲು ಉಳಿಯದ ಹಾಗೆ ಎಲ್ಲವನ್ನೂ ತೆಗೆದು ಬಿಸಾಡುತ್ತಾನೆ. ಆಗ ನದಿಯಿಂದ ದೊಡ್ಡದೊಂದು ಅಲೆ ಎದ್ದು ನಮ್ಮಿಬ್ಬರನ್ನು ಕೊಚ್ಚಿಕೊಂಡು ಹೋಗಲು ಬರುತ್ತದೆ. ಆಗ ನಾವಿಬ್ಬರು ಗಟ್ಟಿಯಗಿ ಕಿರುಚಿಕೊಂಡು ಓಡಿ ಹೋಗುತ್ತೇವೆ.

ಫ್ರಾಯ್ಡ್–"ಕನಸನ್ನು ವ್ಯಕ್ತಿಗಳ ಮುಚಿಟ್ಟ ಬಯಕೆಗಳ ಅನಾವರಣ" ಎಂದು ಹೇಳುತ್ತಾರೆ. 'ತಮ್ಮ ಬಯಕೆಗಳು ಸುಪ್ತ ಚೇತನಕ್ಕೆ ತಳ್ಳಲ್ಪಟ್ಟು ಬಯಕೆಗಳು ಆಕಾಂಕ್ಷೆಗಳು ತಮ್ಮ ಪ್ರೇರಣಾ ಶಕ್ತಿಯನ್ನು ಕಳೆದುಕೊಳ್ಳದೇ ಶಕ್ತಿಯುತವಾಗಿ ಉಳಿದಿದ್ದು ಅವಕಾಶ ಸಿಕ್ಕಾಗಲೆಲ್ಲಾ ತಮ್ಮ ಬಯಕೆಗಳನ್ನು ಈಡೇರಿಸುವ ದಿಕ್ಕಿನಲ್ಲಿ ವ್ಯಕ್ತಿಯ ವರ್ತನೆಯನ್ನು ನಿಯಂತ್ರಿಸುತ್ತಿರುತ್ತವೆ. ಜಾಗೃತ ಮನಸ್ಸು ನಿದ್ದೆಯಲ್ಲಿ ಅಜಾಗೃತವಾದಕನಸಿನ ರೂಪದಲ್ಲಿ ಹಾಗೂ ಅರೆ ಜಾಗೃತಾವಸ್ಥೆಯಲ್ಲಿ ಹಗಲುಗನಸಿನ ರೂಪದಲ್ಲಿ ತಮ್ಮ ಸ್ವರೂಪವನ್ನು ಬದಲಾಯಿಸಿ ವ್ಯಕ್ತಿಯ ಅನುಭವಕ್ಕೆ ಬಂದು ಅರ್ಧಂಬರ್ಧ ತೃಪ್ತಿಯನ್ನು ಪಡೆಯುತ್ತವೆ. ಕೆಲವು ಸಂಧರ್ಭಗಳಲ್ಲಿ ಈ ಸುಪ್ತಾವಸ್ಥೆಯಲ್ಲಿ ಅಡಕವಾಗಿರುವ ಪ್ರೇರಣಾ ನೆಲೆಗಳೇ ಉದಾತ್ತಿಕರಣದ ಮೂಲಕ ಸೃಜನಾತ್ಮಕತೆಗೂ ಪ್ರೇರಣೆಯಾಗಬಹುದು.

ಅದೇ ರೀತಿ ರೀಟಾಳ ಸುಪ್ತ ಮನಸ್ಸಿನಲ್ಲಿದ್ದ ಸಮಸ್ಯೆಯು ಕನಸಿನ ಮೂಲಕ ಹೊರಬರುವ ಪ್ರಯತ್ನ ನಡೆಯುತ್ತವೆ. ಫಾರ್ನಾಂಡಿಸ್‌ನು ಆರ್ಥಿಕವಾಗಿ ಯಾವುದೇ ಕೊರತೆಯಿಲ್ಲದಿದ್ದರೂ ಕುಂಟುಂಬ ನಿಯಂತ್ರಣ ಯೋಜನೆಯನ್ನು ಅನುಸರಿಸಿರುತ್ತಾರೆ. ರೀಟಾ ತಾಯಿ ಇಲ್ಲದ್ದರಿಂದ ಕಾನ್ವೆಂಟ್‌ನಲ್ಲಿಯೇ ಇದ್ದು ಓದುತ್ತಿರುತ್ತಾಳೆ ಇದರಿಂದ ತನ್ನ ಮತ ಧರ್ಮದ ಮೇಲೆ ಬಹಳ ವಿಶ್ವಾಸ ನಂಬಿಕೆಯಿರುತ್ತದೆ. ಮತ್ತೊಮ್ಮೆ ವೈದ್ಯದಲ್ಲಿಗೆ ಬಂದ ದಂಪತಿಗಳಿಬ್ಬರು ಇವರ ಸಮಸ್ಯೆಯೆನೆಂಬುದನ್ನು ಅರಿಯಲು ಅವರನ್ನು ವೀಕ್ಷಣಾ ಕೊಠಡಿಗೆ ಕೂರಿಸಲಾಗುತ್ತದೆ. ಅಲ್ಲಿ ಅವರಿಬ್ಬರ ನಡುವಿನ ಸಂಭಾಷಣೆಯನ್ನು ವೀಕ್ಷಿಸಿದ ವೈದ್ಯರು 'ಇವರಿಬ್ಬರು ಕುಟುಂಬ ನಿಯಂತ್ರಣ ಯೋಜನೆಯನ್ನು ಪಾಲಿಸುತ್ತಿರುವುದು ತಿಳಿಯುತ್ತದೆ. ರೀಟಾಳಿಗೆ ಇದು ಇಷ್ಟವಿಲ್ಲದಿದ್ದರೂ ತಮ್ಮ ಧರ್ಮಕ್ಕೆ ವಿರೋಧವಾದ್ದರಿಂದ ಅವಳು ಇದರಿಂದ ಭಯಭೀತಳಾಗಿ ಈ ರೀತಿಯ ಕನಸುಗಳು ಕಾಡಿತ್ತಿರುತ್ತದೆ'. ಒಂದೆರೆಡು ಬಾರಿ ಗರ್ಭಪಾತಮಾಡಿಸಿಕೊಂಡಿರುವ ರೀಟಾಳಿಗೆ ಬಿದ್ದ ಕನಸು ಅದನ್ನು ಸೂಚಿಸುತ್ತದೆ. ಚೀಲಕ್ಕೆ ಸಣ್ಣ ದುಂಡುಗಲ್ಲುಗಳನ್ನು ಮತ್ತೆ ಹೊರಗೆ ಎಸೆಯುವುದು ಸೂಚ್ಯವಾಗಿದೆ. ಕ್ಯಾಥೋಲಿಕ್ ಜನಾಂಗ ಸಂತಾನ ನಿರೋಧವನ್ನು ಪಾಪವೆಂದೂ ಅಧರ್ಮವೆಂದೂ ಪರಿಗಣಿಸುತ್ತದೆ. ಗರ್ಭದಲ್ಲಿ ಆಶ್ರಯ ಪಡೆದಿದ್ದ ಜೀವಾಣುಗಳನ್ನು ಹೊರಗೆ ದಬ್ಬಿದಾಗಿನಿಂದ ನಿಮ್ಮ ಹೆಂಡತಿಗೆ ಪಾಪ ಭೀತಿ ಮಾದಲಾಗಿ ಮನಸ್ಸು ಹೀಗೆ ಭಯಭೀತಿಯಿಂದ ಹೆದರುತ್ತಿದೆ. ನಿದ್ರೆ ಸರಿಯಾಗಿ ಬಾರದೆ ಇರುವುದು ಊಟ ಮಾಡದೆ ಇರುವುದು ಇವುಗಳ ಸಂಕೇತವಾಗಿದೆ.

ದೇವರು ನಿಮಗೆ ಯಾವುದಕ್ಕೆ ಕಡಿಮೆ ಮಾಡಿಲ್ಲ ನೀವು ನಿಮ್ಮ ಹೆಂಡತಿ ಇಬ್ಬರೂ ಎಲ್ಲ ರೀತಿಯಿಂದಲೂ ಆರೋಗ್ಯವಾಗಿರುವಿರಿ. ನಿಮಗಾಗಲಿ ನಿಮ್ಮ ಹೆಂಡತಿಗಾಗಲಿ ಖಾಯಿಲೆ ಕಸಾಲೆಯಿದ್ದು ನೀವು ಸಂತಾನ ನಿರೋಧ ಪಾಲಿಸಿದ್ದರೆ ಅದು ಎಲ್ಲರೂ ಒಪ್ಪಕೊಳ್ಳುವಂತಹುದು, ಆರೋಗ್ಯದಿಂದಿರುವ ಸಾಕಷ್ಟು ಶ್ರೀಮಂತರೆನಿಸಿಕೊಂಡಿರುವ ನೀವಿಗಳು ಭ್ರೂಣ ಹತ್ಯೆ ಸಂತಾನ

ನಿರೋಧವನ್ನು ಮಾಡುವುದನ್ನು ನಾನು ಖಂಡಿತ ಒಪ್ಪಲಾರೆ, ದೊಡ್ಡ ಕುಟುಂಬದ ಜವಾಬ್ದಾರಿ ಹೊರುವುದು ನನಗಿಷ್ಟವಿಲ್ಲ ಎಂದು ಹೇಳುವುದು ಹೇಡಿತನ, ಎಂದು ಬುದ್ಧಿವಾದ ಹೇಳಿ ಕಳುಹಿಸಿಕೊಡುತ್ತಾರೆ.

ವಿಧವಿಧವಾದ ಚಿತ್ತಾರೂಪಗಳ ಸಮಸ್ಯೆಯನ್ನು ವೈದ್ಯರು ಹಲವು ಮನೋವೈಜ್ಞಾನಿಕ ಪರೀಕ್ಷಾ ಪದ್ಧತಿಯ ಮೂಲಕ ಬಿಡಿಸುತ್ತಾ ಹೋಗುತ್ತಾರೆ. ಪ್ರಮುಖವಾಗಿ ಬರುವ ಎಲ್ಲಾ ಪಾತ್ರಗಳು ಭಿನ್ನವಾದ ಸಮಸ್ಯೆಗಳೊಂದಿಗೆ ಆಗಮಿಸಿ ಪರಿಹಾರವನ್ನೇ ಪಡೆದು ಸಮಸ್ಯೆಯನ್ನು ಬಗೆಹರಿಸಿಕೊಂಡು ತಮ್ಮ ಸುತ್ತ ಮನಸ್ಸನ್ನು ಜಾಗೃತ ಮನಸ್ಸಾಗಿಸಿಕೊಂಡು ಹೊರನಡೆಯುತ್ತಾರೆ. ಆದರೆ ಇಲ್ಲಿ ಬಂದ ಇಲ್ಲಾ ರೋಗಿಗಳು ಗುಣಮುಖರಾಗಿ ಹೊರಹೋಗಿದ್ದಾರೆಂದು ಎಣಿಸಿದರೆ ತಪ್ಪಾದಿತು.

ಬಾಲ್ಯವಿವಾಹದ ಶಾರದಾ ಮತ್ತು ಜಯರಾಮು ದಂಪತಿಯಲ್ಲಿ ಸಾಮರಸ್ಯವಿಲ್ಲದೆ. ವಿಚಿತ್ರವಾಗಿ ಚುಚ್ಚು ಮಾತುಗಳಿಂದ ಕೊಲ್ಲುತ್ತಿದ್ದ ಜಯರಾಮು ಶಾರದಾಳನ್ನೇ ಜೀವಂತ ಶವದಂತೆ ಮಾಡಿರುತ್ತಾನೆ. ಮಾನಸಿಕವಾಗಿ ನೊಂದಿದ್ದ ಶಾರಾದ ತನ್ನ ತಂದೆ ತಾಯಿಯರನ್ನೇ ಶಪಿಸುವ ಮಾತನ್ನು ಕೇಳಬೇಕಾಗಿರುತ್ತೆದೆ ಈ ನಡುವೆ ಶಾರಾದಾ ಗರ್ಭಿಣಿಯಾಗುತ್ತಾಳೆ. ಶಾರಾದಾನನ್ನು ಬಾಣಾಂತನಕ್ಕೆ ಕಳುಹಿಸಿ ಕೊಡಿ ಎಂದು ' ತಂದೆ ಕೇಳಲು ಜಯರಾಮು ಶಿಲಾಮೂರ್ತಿಯಂತೆ ಇದದ್ದನ್ನ ಕಂಡು ಶಾರದೆಯನ್ನು ಇಲ್ಲಿಯೇ ಉಳಿಯಬಿಟ್ಟರೇ ಅವಳು ಅನ್ಯಾಯವಾಗಿ ಸತ್ತು ಹೊಗುತ್ತಾಳೆಂದು ಹೆದರಿ ಅವಳನ್ನು ಬಲವಂತವಾಗಿ ಕರೆದುಕೊಂಡು ಬರುತ್ತಾರೆ. ತಾಳ್ಮೆಗೂ ಒಂದು ಮಿತಿ ಇರುತ್ತದೆ ನೋವನ್ನು ಅನುಭವಿಸಿದ ಮನಸ್ಸು ಒಂದು ದಿನ ಸ್ಫೋಟವಾಗಲೇಬೆಕು ಹಾಗೆಯೇ ಜ್ವಾಲಾಮುಖಿಯಂತೆ ಅವಳ ಮನಸ್ಸು ಈಗ ಸ್ಫೋಟವಾಗಿದೆ. ಅವಳ ಬುದ್ದಿಯು ಕೆಟ್ಟುಹೊಗಿದೆ. ಯಾವಾಗಲೂ ಅಳುತ್ತಾಲೊ ನಗುತ್ತಾಲೊ ಅಥವಾ ತಾನೆ ಮಾತನಾಡಿಕೊಳ್ಳುತ್ತಲೊ ಇರುತ್ತಾಳೆ.

ಇಲ್ಲಿ ಶಾರದೆಯು ಮನೋವಿಕಲ್ಪ ಮಿತಿಮೀರಿದೆ ಪ್ರಾರಂಭಿಕ ಹಂತವಾಗಿದ್ದರೆ ಅದನ್ನು ಸರಿಪಡಿಸಬಹುದಾಗಿತ್ತು. ಈಗಲೂ ಶಾರದೆಯ ತನ್ನ ಪತಿಯಲ್ಲಿ ಇನ್ನೂ ವ್ಯಾಮೋಹವಿದೆ. ಅವನು ಪ್ರೀತಿಯಿಂದ ಶಾರದೆಯನ್ನು ಕಂಡಿದ್ದೆ ಅದಲ್ಲಿ ಅವಳು ಗುಣವಾಗುತ್ತಾಳೆ. ಆದರೆ 'ಜಯರಾಮ್' ಇವಳು ನಾಟಕವಾಡುತ್ತಿದ್ದಾಳೆ ಅವಳನ್ನು ಬಾಣಂತನಕ್ಕೆಂದು ಕರೆದುಕೊಂಡು ಹೋಗಿ ಹೀಗೆ ಮಾಡಿದ್ದಾರೆ ಎಂದು ದೂರುತ್ತಾನೆ. ಶಾರೆದೆಯನ್ನು ಜಯರಾಮುವಿನೊಡನೆ ಮಾತನಾಡಲು ಕರೆದರೆ ಹೆದರಿ ಹೊಗುತ್ತಾಳೆ ಇವಳಿಗೆ ನನ್ನ ಮೇಲೆ ಪ್ರೀತಿ ಇಲ್ಲ ಎಂದು ದೂರುತ್ತಾನೆ, ಅವನು ಅವಳ ಮೇಲೆ ಹೊಂದಿದ್ದ ಕೀಳು ಮನೋಭಾವದಿಂದ. ಅವಳನ್ನು ಪ್ರೀತಿಯಿಂದ ಕಾಣದೆ ಅವಳು ಮನೋರೋಗಿಯಾಗಿಯೇ ಉಳಿಯುತ್ತಾಳೆ.

ಈ ಕಾದಂಬರಿಯಲ್ಲಿ ಬರುವ ಮತ್ತೊಂದು ರೋಗಿ 'ದೃಗ್ಗೋಚರ ಮಾತು ಕರ್ಣಗೊಚರ' ಮನೋವಿಕಲ್ಪವಿರುವ ಅಂದರೆ ಇಲ್ಲದ ವಸ್ತುವನ್ನ ಕಾಣುವ ಮತ್ತು ಇಲ್ಲದ ಶಬ್ಧವನ್ನು ಕೇಳುವ ಭ್ರಮೆ ಇರುವ ಒಬ್ಬ ಹುಡುಗಿಯೂ ವೈದ್ಯರ ರೋಗಿಯಾಗಿ ಬರುತ್ತಾಳೆ. ಅಷ್ಟೇನೂ ರೂಪವತಿಯಲ್ಲದ ಕನಕ ಚಿಕ್ಕಂದಿನಿಂದಲೂ ಅಜ್ಜಿಯ ನಿಂದನೆಯ ಮಾತುಗಳು ಬೈಗಳುದಿಂದ

ಬೆಳೆದಿರುತ್ತಾಳೆ, ಕನಕ ಏನು ಮಾಡಿದರೂ ತಪ್ಪು ಏನೂ ಮಾಡದಿದ್ದರೂ ತಪ್ಪನ್ನು ಕಂಡುಹಿಡಿಯುವ ಅಜ್ಜಿ ಕನಕಾಳ ವಿವಾಹವನ್ನು ನೋಡುವ ಬಯಕೆಯನ್ನು ವ್ಯಕ್ತಪಡಿಸುತ್ತದೆ ಅಷ್ಟರಲ್ಲಿ ಅಜ್ಜಿ ಸಾವನ್ನಪುತ್ತಾರೆ ಅಜ್ಜಿಯ ನಿಂದನೆ ಇಲ್ಲಿಗೆ ಮುಗಿಯಿತು ಎಂದು ಸಂತೋಷದಿಂದರಬೇಕಾದ ಕನಕ ಭಯದಿಂದ ನಿದ್ರೆ ಮಾಡುವುದಿಲ್ಲ, ಊಟ ಮಾಡುತ್ತಿರುವುದಿಲ್ಲ, ಎಲ್ಲಿ ಅಜ್ಜಿ ಬಂದು ತನ್ನ ಊರುಗೋಲಿನಿಂದ ಹೊಡೆಯುತ್ತಾಳೊ ಎಂದು ಇಡೀ ರಾತ್ರಿ ಹಾಸಿಗೆ ಮೆಲೆ ಎದ್ದು ಕುಳಿತು ಕೊಂಡಿರುತ್ತಾಳೆ. ಕನಕಳಿಗೆ ಬಿದ್ದ ಕನಸಿನಲ್ಲಿ ಅಜ್ಜಿಯು ಕನಕಳ ರೂಮಿಗೆ ಕೋಲಿನ ಟಕ್ ಟಕ್ ಸದ್ದು ಸಹಿತ ನಿಧಾನವಾಗಿ ಬಂದು ನನ್ನ ಹಾಸಿಗೆಯ ಬಳಿ ನಿಂತು ಬೆರಳಿನಿಂದ ನನ್ನ ಕಡೆ ತೋರಿಸಿ ಬಾಯಿ ಅಲುಗಾಡಿಸಲು ಅವಳೇನು ಹೇಳಿದಳೊ ನನಗೆ ತಿಳಿಯಲಿಲ್ಲ ಅಜ್ಜಿ ಯಾವಾಗಲೂ ಕೆಮ್ಮುತ್ತಿದ್ದಂತೆ ಕೋಲಿನ ಸದ್ದು ಟಕ್ ಟಕ್ ಕೇಳುತ್ತಿದೆ ಈಗಲೂ ಎಂದು ಕನಕ ಚೀರಿತ್ತಿದ್ದಳು.

ಸದಾ ಅಜ್ಜಿಯ ಭಯದಿಂದ ಬೆಳೆದ ಕನಕ ಹೊರಗೆ ಬಿಳಿಮೋಡವನ್ನುನೋಡಿ ಮುದುಕಿಯೊಬ್ಬಳ ಕೆದರಿದ ಬಿಳಿಕೂದಲಿನಂತಿದೆ ಎಂದು ಭಾವಿಸುತ್ತಾಳೆ, ಗಡಿಯಾರದ ಟಕ್ ಟಕ್ ಸದ್ದನ್ನು ಅಜ್ಕಿಯ ಕೋಲಿನ ಸದ್ದು ಎಂದು ತಿಳಿಯುತ್ತಾಳೆ, ಸತ್ತಿರುವ ಅಜ್ಜಿಯು ಕನಕಳ ಸುಪ್ತಮನಸ್ಸಿನಿಂದ ಮಾತ್ರ ಹೊರಹೋಗಿರುವುದಿಲ್ಲ ವೈದ್ಯರು ಕನಕಳಿಗೆ 'ಮಸಿ ಕಲೆ' ಪರೀಕ್ಷೆಯನ್ನು ಮಾಡುತ್ತಾನೆ. ಈ ಪರೀಕ್ಷೆಯಲ್ಲಿ ವ್ಯಕ್ತಿಯ ಮನಸ್ಸಿನಲ್ಲಿರುವ ಆಸಕ್ತಿ, ಭಾವನೆಗಳು, ಭಯಗಳು ಇಲ್ಲಿ ವ್ಯಕ್ತವಾಗುತ್ತದೆ. ಇಲ್ಲಿ ಕನಕಳ ಮಸಿಕಲೆಯ ಚಿತ್ತನ್ನು ನೋಡಿ ಮುದುಕಿಯ ಬಾಗಿದ ಸೊಂಟದಂತೆ ಕಾಣುತ್ತದೆ. ಮುದುಕಿಯೊಬ್ಬಳು ಯಾರ ಕಡೆಯೋ ಬೆರಳು ತೋರಿಸಿ ಬೈಯುತ್ತಿರುವ ಹಾಗಿದೆ. ಮೂರನೆಯದು ಮುದುಕಿಯೊಬ್ಬಳು ಬೊಚ್ಚು ಬಾಯಿದ್ದ ಹಾಗಿದೆ ಹೀಗೆ ಪ್ರತಿಚಿತ್ತನಲ್ಲಿ, ಪ್ರತಿ ವಸ್ತುವಿನಲ್ಲಿ ಮುದುಕಿಯ ರೂಪವನ್ನು ಕಾಣುತ್ತಿರುತ್ತಾಳೆ.

ಕನಕಳ ಭ್ರಮೆಯನ್ನು ಗುರುತಿಸಿದ ವೈದ್ಯರು, ಧೈರ್ಯದ ಸಾಂತ್ವಾನದ ಮಾತುಗಳನ್ನು ಆಡುತ್ತಾರೆ 'ಮೂದಲಿಕೆ, ಬೈಗಳು ತಿರಸ್ಕಾರ ಈ ಬಗೆಯ ಜೀವನಕ್ಕೆ ನಿನ್ನ ಜೀವ ಒಗ್ಗಿ ಹೋಗಿತ್ತು ಆ ಮುದುಕಿ ಸತ್ತು ಹೋದ ಮೇಲೆ ನಿನಗೆ ಹುಚ್ಚು ಹಿಡಿದು ಬಿಟ್ಟಂತಾಗಿದೆ. ಇದ್ದಕಿದ್ದಂತೆಯೇ ನಿನ್ನ ಮನಸ್ಸಿಗೆ ದೊರೆತ ಶಾಂತಿ ಬಿಡುಗಡೆ ಇವುಗಳಿಂದ ನೀನು ಬೆರಗಾಗಿರುವೆ ಜೊತೆಗೆ ಮುದುಕಿಯಾಡಿದ ಕೊನೆಯ ಮಾತು ನಿನ್ನೆದೆಯಲ್ಲಿ ಬಲವಾಗಿ ನಾಟಿದೆ 'ನಿನಗೆ ಮದುವೆಯಾಗುವುದಕ್ಕೆ ಮುಂಚೆ ನಾನು ಸತ್ತರೆ ನನ್ನ ಆತ್ಮಕ್ಕೆ ತೃಪ್ತಿಯಿರುವುದಿಲ್ಲ ಎಂದು ಮುದುಕಿ ನುಡಿದ ಮಾತುಗಳು ನಿನ್ನನ್ನು ಬೇಟೆಯಾಡುತ್ತಿವೆ', ನಿನ್ನನ್ನು ಕಾಡುತ್ತಿರುವವಳು ಮುದುಕಿಯಲ್ಲ– ಅವಳ ಮಾತುಗಳು ಇದು ಕೇವಲ ಮನಸ್ಸಿನ ಭ್ರಮೆ ಎಂದು ಕನಕಳ ಸುಪ್ತ ಮನಸ್ಸಿನಲ್ಲಿದ್ದ ಭಯ ಭೀತಿಯನ್ನು ಹೋಗಲಾಡಿಸಿ ಧೈರ್ಯ ಹೊಸ ಚೈತನ್ಯವನ್ನು ತುಂಬುವ ಕೆಲಸವನ್ನು ವೈದ್ಯರು ಮಾಡುತ್ತಾರೆ.

ಹೀಗೆ ಅನೇಕ ರೋಗಿಗಳು ಇಲ್ಲಿ ಬಂದು ತಮ್ಮ ಮನೋವಿಕಲ್ಪಕ್ಕೆ ಕಾರಣ ಅರಿತು ಗುಣಮುಖವಾಗಿ ಹೊರಹೋಗುತ್ತಾರೆ ಆದರೆ ಮನೋವೈಕಲ್ಯವು ಮಿತಿಮೀರಿದ ಹಂತದಲ್ಲಿ ಬಂದಿದ್ದ ಆದರಲ್ಲಿ ಅವರು ಶಾಶ್ವತವಾಗಿ ಅದೇ ಸ್ಥಿತಿಯಲ್ಲಿರುವುದು ಈ ಕಾದಂಬರಿಯಲ್ಲಿ ತಿಳಿಸುತ್ತಾರೆ. 'ಮುಚ್ಚಿದ ಬಾಗಿಲು' ಎಂಬ ಕಾದಂಬರಿಯ ಶೀರ್ಷಿಕೆಯು ಇಲ್ಲಿನ ಅನೇಕ

ಮನೋರೋಗಿಗಳ ಮನಸ್ಸನ್ನು ಪ್ರತಿನಿಧಿಸುತ್ತದೆ. ನಾವು ಈ ಕಾದಂಬರಿಯಲ್ಲಿ ಕೆಲವೇ ರೋಗಿಗಳ ಸಮಸ್ಯೆಯನ್ನ ತಿಳಿದೆವು ಅದಕ್ಕೆ ಸೂಕ್ತ ಚಿಕಿತ್ಸೆಯನ್ನು ವೈದ್ಯರು ನೀಡಿದ್ದನ್ನು ಕಾಣುತ್ತೇವೆ. ಆದರೆ ಇನ್ನು ಆಸ್ಪತ್ರೆಯಲ್ಲೇ ಇರುವ ರೋಗಿಗಳ ಮನಸ್ಸು ಮುಚ್ಚಿದ ಬಾಗಿಲಾಗಿವೆ. ಅವರ ಮನಸ್ಸಿನ ಬಾಗಿಲನ್ನು ತೆರೆದರೆ ಎಂಥೆಂತ ನೋವುಗಳು ಅವರನ್ನು ಬೇಟೆಯಾಡುತ್ತಿರುತ್ತವೆ ಎಂಬುದು ತಿಳಿಯುತ್ತದೆ.

ತ್ರಿವೇಣಿಯವರು ವೈದ್ಯನ ಮುಖಾಂತರ ಹೇಳಿಸುವುದೆನೆಂದರೆ ನಿಜವಾದ ಮನೋರೋಗಿಗಳ ಅಥವಾ ಹುಚ್ಚರು ಆಸ್ಪತ್ರೆಯ ಹೊರಗೆ ಉಳಿದಿದ್ದಾರೆ ಇಲ್ಲಿರುವವರೆ ಶುದ್ಧಮನಸ್ಸಿನ ಒಳ್ಳೆಯ ವ್ಯಕ್ತಿಗಳು ಹೊರ ಜಗತ್ತಿನಲ್ಲಿ ಹಣ ಆಸ್ತಿ ದುರಾಸೆಯಿಂದ ಲೋಭ ತನದಲ್ಲಿ ಅನೇಕ ತಪ್ಪುಗಳಲ್ಲಿ ಪಾಲ್ಗೊಂಡರು ಅವರಲ್ಲಿ ಅನೇಕ ತಪ್ಪಿತಸ್ಥ ಭಾವನೆಗಳು ಅವರನ್ನು ಭೇಟಿಯಾಡುತ್ತಿರುವವು ಆದರೆ ಅವರು ಆಸ್ಫತ್ರೆಯಿಂದ ಹೊರಗಿರುವ ಹುಚ್ಚರು ಎಂದು ಸಾಬೀತು ಪಡಿಸುತ್ತಾರೆ.

<u>ಅಡಿ ಟಿಪ್ಪಣಿ</u>

೧. ಸಾಹಿತ್ಯ ಮತ್ತು ಮನೋವಿಜ್ಞಾನ– ಸಂ ಬರಗೂರು ರಾಮಚಂದ್ರಪ್ಪ,
ಕಾರ್ನಾಟಕಾ ಸಾಹಿತ್ಯ ಅಕಾಡೆಮಿ

## ಶರಪಂಜರ

ಶ್ರೀಮತಿ ತ್ರಿವೇಣಿಯವರು ಇಹ ಲೋಕದ ತ್ಯಜಿಸಿದ ಮೇಲೆ ೧೯೬೫ ರಲ್ಲಿ ಬೆಳಕು ಕಂಡ ಇವರ ಇಪ್ಪತ್ಮೂರನೆಯ ಕೃತಿ 'ಶರಪಂಜರ' ಇವರ ಮನೋವೈಜ್ಞಾನಿಕ ಕಾದಂಬರಿಗಳಲ್ಲಿ ಕೊನೆಯ ಕಾದಂಬರಿಯು ಕೂಡ ಶರಪಂಜರ.

ಇದೊಂದು ಹೃದಯ ಸ್ಪರ್ಶಿ ಕಾದಂಬರಿ ಇದರ ಸ್ಥಾಯಿಭಾವ ಗಾಢ ದುರಂತ ಪ್ರಜ್ಞೆಯಿಂದ ಜನಿಸುವ ಅನುಕಂಪ-ಕಾದಂಬರಿಯಲ್ಲಿ ತ್ರಿವೇಣಿಯವರು ಒತ್ತು ಕೊಡುವುದು ಒಂದು ವಿಶಿಷ್ಟ ಮಾನಸಿಕ ವೈಕಲ್ಯ ಮತ್ತು ಅದರ ಚಿಕಿತ್ಸೆ ಇವಲ್ಲದೆ ಮಾನಸಿಕ ಚಿಕಿತ್ಸೆ ಪಡೆದು ಸ್ವಾಸ್ಥ್ಯವನ್ನು ಮರಳಿ ಪಡೆಯುವ ವ್ಯಕ್ತಿಯ ಬಗ್ಗೆ ತನ್ನ ಕುಟುಂಬ ಹಾಗೂ ಸಮಾಜವು ಹೇಗೆ ಪ್ರತಿಕ್ರಿಯಿಸುತ್ತದೆ. ಆ ವ್ಯಕ್ತಿ ಮರಳಿ ಸಮಾಜದಲ್ಲಿ ತನ್ನ ಸ್ಥಾನಮಾನಗಳನ್ನು ಪಡೆಯುವುದು ಸಾಧ್ಯವೆ ಎಂಬುದರ ಬಗ್ಗೆ ಈ ಕಾದಂಬರಿ ಉತ್ತರ ನೀಡುತ್ತದೆ.

ಕಾದಂಬರಿಯ ಮುಖ್ಯ ಪಾತ್ರ ಕಾವೇರಿಯು ಮಾನಸಿಕ ಚಿಕಿತ್ಸಾ ಕೇಂದ್ರದಿಂದ ತನ್ನ ಸ್ವಾಸ್ಥ್ಯವನ್ನು ಮರಳಿ ಪಡೆದು ತನ್ನ ಪತಿ ಸತೀಶನೊಂದಿಗೆ ಮೈಸೂರಿಗೆ ಪ್ರಯಾಣ ಮಾಡುತ್ತಿರುವುದರೊಂದಿಗೆ ಪ್ರಾರಂಭವಾಗುವ ಕಥೆಯು ಹಿಮ್ಮಿಂಚು ಹಾಗೂ ವರ್ತಮಾನ ಚಿತ್ರಣಗಳೊಂದಿಗೆ ಬೆಳೆಯುತ್ತದೆ. ತನ್ನ ಗೆಳೆಯನೊಬ್ಬನ ವಿವಾಹಕ್ಕೆ ಮೈಸೂರಿನಿಂದ ಕೊಡಗಿಗೆ ಬಸ್ಸಿನಲ್ಲಿ ಪ್ರಯಾಣಮಾಡುತ್ತಿದ್ದ ಸುಂದರ ಯುವಕ ಸತೀಶ ಅದೇ ಬಸ್ಸಿನಲ್ಲಿ ಪ್ರಯಾಣ ಮಾಡುತ್ತಿದ್ದ ರೂಪವಂತ ಹೆಣ್ಣು ಕಾವೇರಿಯಲ್ಲಿ ಅನುರಕ್ತನಾಗಿ ವಿವಾಹವಾಗುತ್ತಾನೆ. ಈ ಸನ್ನಿವೇಶದಲ್ಲಿ ಅವನ ಗೆಳಯನೊಬ್ಬನು ಕಾವೇರಿಯ ನಡತೆಯ ಬಗ್ಗೆ ಅಪಸ್ವರ ನುಡಿದರೂ ಅವಳಲ್ಲಿ ನಿರ್ಮಲ ಪ್ರೇಮವನ್ನಿರಿಸಿದ ಸತೀಶನು ಈ ಅಪಾದನೆಯನ್ನು ತಿರಸ್ಕರಿಸುತ್ತಾನೆ. ಕಾವೇರಿಯ ಕೈಹಿಡಿದ ನಂತರ ಸತೀಶನ ಜೀವನವು ಸಂತೋಷದ ಸಾಗರವಾಗುತ್ತದೆ. ಇವರ ದಾಂಪತ್ಯ ಜೀವನ ಇತರರು ಅಸೂಯೆಪಡುವಷ್ಟು ಸುಖ-ಸಂತೋಷಗಳಿಂದ ತುಂಬಿರುತ್ತದೆ.

ಕಾವೇರಿ ಮನೆಯ ಪ್ರತಿಯೊಂದು ಕೆಲಸದಲ್ಲಿ ಆಸಕ್ತಿ ತೋರಿಸುತ್ತಿದ್ದಳು ಸತೀಶನು ತನ್ನ ಎಲ್ಲಾ ಕೆಲಸದಲ್ಲಿ ಕಾವೇರಿಯನ್ನೇ ಅವಲಂಬಿಸಿದನು ಅಂದಾಜು ಹಾಕಿ ಕಟ್ಟಿಸಿದ ಕನಸಿನ ಮನೆಯದು ಕಾವೇರಿಯ ಅಭಿರುಚಿಯಲ್ಲಿ ಸತೀಶನಿಗೆ ಅಪಾರ ನಂಬಿಕೆಯಿತ್ತು ಆದುದರಿಂದ ಅವನು ಮನೆಯನ್ನು ಕಟ್ಟಿಸುವ ಅಧಿಕಾರವನ್ನು ಹೆಂಡತಿಗೆ ಸಂಪೂರ್ಣವಾಗಿ ಬಿಟ್ಟುಕೊಟ್ಟಿದ್ದ ಅವಳು ಕೇಳಿ ಕೇಳಿದಷ್ಟು ದುಡ್ಡು ಕೊಡುವುದು ಮಾತ್ರ ಅವನ ಕೆಲಸವಾಗಿತ್ತು.

ಚಂದ್ರ ಹಾಸದ ಯೋಜನೆ ಐದಾರು ವರ್ಷಗಳ ಹಿಂದಿನದು ಈ ಅವಧಿಯಲ್ಲಿ ಮೈಸೂರು ನಗರದಲ್ಲಿ ಕಟ್ಟಿದ ಪ್ರತಿಯೊಂದು ಹೊಸ ಮನೆಯನ್ನು ಕಾವೇರಿ ಅವರು ಪರಿಚಯದವರಾಗಲಿ, ಪರಿಚಯವಿಲ್ಲದಿರಲಿ ಹೋಗಿ ನೋಡಿಕೊಂಡು ಬರುತ್ತಿದ್ದಳು. ಅಮೇರಿಕ, ಇಂಗ್ಲೆಡಿನಿಂದ ಹೊರಡುತ್ತಿದ್ದ ಮಾಸ ಪತ್ರಿಕೆಗಳನ್ನು ತರಿಸಿ ಮನೆಯನ್ನ ಹೇಗೆ ಅಲಂಕರಿಸುವುದೆಂದು ತಿಳಿಯುತ್ತಿದ್ದಳು. ತಮ್ಮ ಮನೆಯ ಸಮೀಪದಲ್ಲೆಯೇ ಇದ್ದ ಜಪಾನೀ

ಯುವತಿಯೊಬ್ಬಳಿಂದ ಹೂವುಗಳನ್ನು ಜೋಡಿಸಿ ಹೂ ದಾನಿಗಳಲ್ಲಿ ಬೇಗ ಬಾಡದೆ ಇರುವ ರೀತಿಯನ್ನು ಕಾವೇರಿ ಕಲಿತುಕೊಂಡಿದ್ದಳು. ಬಾಗಿಲಿಗೆ, ಕಿಟಕಿಗೆ ತೆರೆಗಳು, ಸೋಫಾ ಕುರ್ಚಿಗಳಿಗೆ ಕಸೂತಿಯ ಗೌಸುಗಳ ಮನೆಯೊಡತಿಯಿಂದ ತಯಾರಾದವು.

ತನ್ನ ಮಗ ಅಶೋಕ ಹುಟ್ಟುವ ಗಳಿಗೆಯವರೆವಿಗೂ ಕಾವೇರಿ ಪ್ರತಿದಿನ ಬೆಳಗ್ಗೆ ಸಂಜೆ ಯಾವಾಗ ಮನಸ್ಸು ಬಂದರೂ ಸರಿ ಸೈಟಿನ ಬಳಿ ಹೋಗಿ ತಾನೇ ಸ್ವತಃ ಎಲ್ಲವನ್ನು ನೋಡಿ ಕಂಟ್ರಾಕ್ಟರೊಡನೆ ಚರ್ಚೆ ನಡೆಸಿ ಬರಿತ್ತಿದ್ದಳು.

ಮನೆಯ ಹಿಂಭಾಗದಲ್ಲಿ ತರಕಾರಿಯ ತೋಟ ಹಸಿರು ಕಾಯಿಗಳಿಂದ ಚಿಗುರೊಡೆದರೆ ಮನೆಯ ಮುಂಭಾಗದಲ್ಲಿ ಮಲ್ಲಿಗೆ ಜಾಜಿ ಗುಲಾಬಿ ಸಂಪಿಗೆ ಗಿಡಗಳು ಅತಿಥಿಗಳನ್ನು ತಮ್ಮ ಸುವಾಸನೆ ಸೌಂದರ್ಯದಿಂದ ಸ್ವಾಗತಿಸುತ್ತಿದ್ದವು. ಗೃಹ ಪ್ರವೇಶಕ್ಕೆ ಬಂದವರೆಲ್ಲಾ ಕಾವೇರಿಯ ಅಭಿರುಚಿಯನ್ನು ಮುಕ್ತ ಕಂಠದಿಂದ ಹೊಗಳಿ ಹೋದರು. ಅವಳ ಅದೃಷ್ಟ ಪುಣ್ಯವನ್ನು ನೋಡಿ ಕೊರಗಿದರೂ ಬಹುಮಂದಿ, ಸತೀಶ ಹಿರಿಯ ಮಗ ಅರವಿಂದ ಎರಡನೆಯವ ಅಶೋಕ, 'ಚಂದ್ರಹಾಸ' ದಂತಹ ಮನೆ ಕಾವೇರಿಗೆ ಜೀವನದಲ್ಲಿ ಯಾವ ಕೊರತೆಯಿಟ್ಟಿತು?

ಕಾವೇರಿ ಮತ್ತು ಸತೀಶ ದಾಂಪತ್ಯದಲ್ಲಿ ಯಾವುದೇ ಕೊರತೆಯಿಲ್ಲದೆ ಅಸೂಯೆ ಪಡುವಂತೆ ಸಾಗಿತ್ತು ವಿವಾಹವಾಗಿ ವರ್ಷಗಳು ಕಳೆದರೂ ಕಾವೇರಿಯ ಸೌಂದರ್ಯಕ್ಕೆ ಸತೀಶ, ಸತೀಶನ ಸೌಂದರ್ಯಕ್ಕೆ ಕಾವೇರಿ ಮಾರಿಹೋಗಿದ್ದರು. ಒಮ್ಮೆ ಸತೀಶನು ಎಷ್ಟೊಂದು ಮಾತನಾಡುತ್ತಾನೆ. ಇವರ ತಾಯಿ ಹೆಚ್ಚು ಮಾತಾನಾಡುವ ಸ್ವಭಾವದವರಾಗಿರಲಿಲ್ಲ, ಆದರೂ ಸತೀಶನು ವಕೀಲನ ಹಾಗೆ ಮಾತಾನಾಡುವ ಬಗ್ಗೆ ಸತೀಶನನ್ನು ಕೇಳಿದಾಗ 'ಹತ್ತಿರ ಬಾ ಹೇಳ್ತೀನಿ'–ಎಂದಿದ್ದ ಸತೀಶ ಸರಿ ನೀವು ಹೇಳುವುದು ನನಗೆ ಗೊತ್ತು ಅಷ್ಟೊಂದು ಮುತ್ತುಗಳನ್ನು ಒಂದು ದಿನದಲ್ಲಿ ಅಂಗಿಸಿಕೊಳ್ಳಲಾರೆ ಈಗಾಗಲೇ ನನಗೆ ಅಜೀರ್ಣವಾಗಿ ಹೋಗಿದೆ.

ಸತೀಶ ಕಾವೇರಿಯ ಮುದ್ದು ಮುಖವನ್ನು ತನ್ನ ಬೊಗಸೆಯಲ್ಲಿ ಹಿಡಿದು ಈ ಕಣ್ಣುಗಳು ಕಾಂತಿ ತುಟಿಗಳ ರಂಗು ಹಲ್ಲಿನ ಹೊಳಪು, ಕೂದಲಿನ ಕಮನೀಯತೆ ಯೌವ್ವನದ ಉಬ್ಬರ, ನನ್ನನ್ನು ಮಾತನಾಡುವಂತೆ ಮಾಡುತ್ತವೆ ಎಂದಿದ್ದು ಓ ಆಗ ಕಾವೇರಿಯ ಎದೆ, ಸಂತಸದಿಂದ ಬಿರಿದಿತ್ತು. ತನ್ನ ಹಾಲುಗೆನ್ನೆಯ ಮೇಲೆ ನೀಳ್ರೆಪ್ಪೆಗಳನ್ನೇ ಕವಿಸುತ್ತಾ ಕಾವೇರಿ ಲಲ್ಲೆಗರೆದಿದ್ದಳು ಊಂ............ ಒಂದು ಪಕ್ಷ ನಾಳೆ ನನ್ನ ಕಣ್ಣಿನ ಕಾಂತಿ ಮಾಸಿದರೆ?.ಕೂದಲು ಉದುರಿದರೆ? ಯೌವ್ವನದ ಬೆಡಗು ಅಳಿದು ಮುದುಕಿಯಾದರೆ?

"ಮುದುಕಿಯಾದಾಗ ನಾನು ಹುಡುಗನಾಗಿರುತ್ತೇನೆಯೇ? ಆಗ ನಾನು ಮುದುಕನಾಗುತ್ತೇನೆ" ಎಂದು ನುಡಿದಿದ್ದನು. ಇಷ್ಟು ತಮ್ಮ ಪ್ರೇಮ ಸೌಂದರ್ಯದಲ್ಲಿ ಆಸಕ್ತರಾಗಿದ್ದರು. ಸತೀಶನ ಚೆಲುವಿಗೆ ಈತನ ಆಫೀಸಿನ ಕೆಲವರು ಸ್ತ್ರೀಯರು ಮನಸೋತಿರುತ್ತಾರೆ. ಅದರಲ್ಲಿ ವಿಮಳ ಎಂಬುವಳು ಸತೀಶನು ತನಗೆ ದಕ್ಕಲಾರದವನು ಎಂದು ತಿಳಿದಿದ್ದರೂ ಅವನ ಮೇಲಿನ ವ್ಯಾಮೂಹ ಮಾತ್ರ ಹೋಗಿರುವುದಿಲ್ಲ. ಕಾವೇರಿಯು ಎರಡನೆಯ ಬಾರಿ ಗರ್ಭಿಣಿಯಾದಾಗ ಸತೀಶ ಅವಳನ್ನೇ ಬಿಟ್ಟಿರಲಾರದೆ ಸಂಕಟಕ್ಕೆ ಹೆರಿಗೆ ಆಗಲಿ ಎನ್ನುತ್ತಾನೆ.

ಹಾಗೆಯೇ ಹೆರಿಗೆ ಗಂಡನ ಮನೆಯಲ್ಲಿಯೇ ಆಗುತ್ತದೆ. ಹೆರಿಗೆಯ ನಂತರ ಕಾವೇರಿ ದೈಹಿಕವಾಗಿ ಮತ್ತು ಮಾನಸಿಕವಾಗಿ ದುರ್ಬಲಗೊಳ್ಳುತ್ತ ಹೋಗುತ್ತಾಳೆ . ಈ ಕಾರಣದಿಂದಾಗಿ ಇದೇ ಸಮಯದಲ್ಲಿ ಅವಳ ಸುಪ್ತ ಚಿತ್ರದಲ್ಲಿ ಹುದುಗಿದ್ದ ಅವಳ ವಿವಾಹ ಪೂರ್ವ ಘಟನೆಯೊಂದು (ಅವಳ ಸೋದರತ್ತೆಯ ಮಗನೊಡನೆ ಒಂದು ಬಾರಿ ಘಟಿಸಿದ ಅನ್ಯೈತಿಕ ಸಂಬಂಧ) ಮತ್ತೆ ಜಾಗೃತಗೊಂಡು ಕಾವೇರಿ ತೀರಾ ಪಾಪ ಪ್ರಜ್ಞೆಗೆ ಒಳಗಾಗಿರುತ್ತಾಳೆ. ಮನೋವಿಕಾರದಿಂದ ನರಳಲು ಪ್ರಾರಂಭಿಸುತ್ತಾಳೆ.

ಒಂದು ಸಂಜೆ ಸತೀಶ ಆಫೀಸಿನಿಂದ ಮನೆಗೆ ಬಂದ ಅವನು ಮನೆಗೆ ಬಂದಾಗ ಮನೆಯಲ್ಲಿ ಮೌನ ಸಾಮ್ರಾಜ್ಯ ಸ್ಥಾಪಿಸಿತ್ತು, ಸತೀಶ ಎಂದಿನಂತೆಯೇ ಮೊದಲು ಕಾವೇರಿಯಿದ್ದ ಕೊಠಡಿಯ ಬಳಿಗೆ ನಡೆದು ಕಾವೇರಿಯನ್ನು ಮಾತನಡಿಸಲು ಹೋಗುತ್ತಿದ್ದ ತಾಯಿ ಬಾಗಿಲಿನಲ್ಲಿ ನಿಂತಿದ್ದ ಸತೀಶನಿಗೆ ಸನ್ನೆ ಮಾಡಿ ಮಗನನ್ನು ತನ್ನ ಬಳಿಗೆ ಕರೆದರು. ಸತೀಶ ತಾಯಿಯ ಕಡೆ ಪ್ರಶ್ನಾರ್ಥವಾಗಿ ನೋಡಿದ ಸುಂದರಮ್ಮ ತಮ್ಮ ಬಾಯಿಯ ಮೇಲೆ ಬೆರಳಿಟ್ಟು ಮಗನಿಗೆ ಸದ್ದು ಮಾಡಬಾರದೆಂದು ಸೂಚಿಸಿದರು.

ಹಾಗೆ ಹೇಳುವಾಗ ಸುಂದರಮ್ಮನವರ ಮುಖದಲ್ಲಿ ಭೀತಿ ಕಳವಳ ಮನೆ ಮಾಡಿತ್ತು, ಸತೀಶ ತಾಯಿಯನ್ನು ಹಿಂಬಾಲಿಸಿದ ಸುಂದರಮ್ಮ ಮಗನನ್ನೇ ಒಳಗೆ ಕರೆದುಕೊಂಡು ಹೋದರು. ಸತೀಶ ಆತಂಕದ ಸ್ವರದಲ್ಲಿ ಕೇಳಿದ 'ಏನಮ್ಮ ?'
ಕಾವೇರಿ ಎಂದಿನಂತಿಲ್ಲಪ್ಪ ನೀನು ಆಫೀಸಿಗೆ ಹೋದಾಗಿನಿಂದಲೂ ಅವಳು ಮಂಕಾಗೇ ಇದ್ದಳು ಬೆಳಗಿನಿಂದ ಊಟ ತಿಂಡಿ ಸಹ ಮಾಡಿಲ್ಲ, ಸಹಿದು ಕೊಂಡಿದ್ದಾಳೆ ಮಾತನಾಡಿಸುವುದಕ್ಕೆ ಹೋದರೆ ಮಾತನಾಡದೇ ಸುಮ್ಮನೇ ಅಳುತ್ತಾಳೆ. ಬೆಳಗಿನಿಂದ ತಲೆಬಾಚಿ ಕೊಂಡಿಲ್ಲ ಅಶೋಕನನ್ನು ಸಹ ಒಂದು ಬಾರಿ ಎತ್ತಿ ಕೊಂಡಿಲ್ಲ , ಸತೀಶ ಕಾವೇರಿಯನ್ನು ನೋಡಲು ಅವಳಿದ್ದ ಕೋಣೆಗೆ ಹೋದ ಕಾವೇರಿ ಅಲುಗಾಡದೆ ಮಲಗಿರುವುದನ್ನು ನೋಡಿ ಸತೀಶನಿಗೆ ಅವಳು ನಿದ್ರಿಸುತ್ತಿರಬಹುದೆನಿಸಿತು. ಅವಳನ್ನು ಎಚ್ಚರಗೊಳಿಸುವುದು ಅವನಿಗೆ ಇಷ್ಟವಿರಲ್ಲಿಲ್ಲ. ಅವನು ಬಂದಂತೆಯೇ ಹಿಂತಿರುಗಿ ರೂಮಿನಿಂದ ಹೊರಗೆ ಹೊರಡುವುದರಲ್ಲಿದ್ದ ಆಗ ಕಾವೇರಿ ಸತೀಶನ ಕಡೆ ತಿರುಗಿದಳು.

ಬೆಳಗಿನಿಂದ ಊಟವಿಲ್ಲದೆ ಕಾವೇರಿಯ ಮುಖ ಒಣಗಿ ಹೋಗಿತ್ತು. ಅವಳ ಕಣ್ಣುಗಳು ಕಾಂತಿ ಲವಲವಿಕೆಯನ್ನು ಕಳೆದುಕೊಂಡು ತೇಜೋಹೀನವಾಗಿದ್ದವು. ಸತೀಶನನ್ನು ಕಾವೇರಿ ತಾನಾಗಿಯೇ ಮಾತನಾಡಿಸಿದಳು.

'ಯಾವಾಗ ಬಂದಿರಿ?'
'ಈಗ ತಾನೇ ಬಂದೆ',
'ಕಾಫಿ ತಿಂಡಿ ಆಯಿತೆ?'
'ಇಲ್ಲ ನೀನು ಬಾ ಒಟ್ಟಿಗೆ ತಗೊಳ್ಳೋಣ"
ನನಗೆ ಬೇಡ ಹಸಿವಿಲ್ಲ–ಎಂದಳು ಕಾವೇರಿ.
ಹಾಗಾದರೆ ನನಗೂ ಬೇಡ– ಎಂದ ಸತೀಶ.

ಸತೀಶನ ಮಾತನ್ನು ಕೇಳಿ ಕಾವೇರಿ ನಕ್ಕಳು ಹಾಗೇಯೇ ನಾಲ್ಕಾರು ನಿಮಿಷಗಳ ಕಾಲ ನಗುತ್ತಲೆ ಇದ್ದಳು ಅವಳು ಮಾತುಗಳಲ್ಲಿ ನಗುವಂತಹುದು ಏನಿದ್ದಿತೋ ಅದು ಕಾವೇರಿಗೆ ತನ್ನ ಪಾಪ ಪ್ರಜ್ಞೆ ಕಾಡುತ್ತಿತ್ತು ಅದನ್ನೆ ನೆನೆಯುತ್ತಾ ಮನ್ನ ಮಾನಸಿಕ ಸ್ಥಿತಿ ದೈಹಿಕ ಸ್ಥಿತಿ ಇನ್ನು ಹದಗೆಟ್ಟಿತ್ತು. ಸತೀಶನು ಕಾವೇರಿಯ ಸ್ಥಿತಿಯನ್ನೇ ನೋಡಲಾರದೆ ಹೊರಗೆ ಸುತ್ತಾಡಿ ಕೊಂಡು ಬರಲು ಅಂದು ಗಂಡನ ಮುಖವನ್ನು ಗುರುತಿಸದಂತೆ ಅಸ್ವಸ್ಥಳಾಗಿದ್ದಳು.

ಸತೀಶ ಆಸ್ಪತ್ರೆಗೆ ಹೋಗಲು ಥಂಡಿಯೆಂದು ಶಾಲೊಂದನ್ನು ತಂದು ಹೆಂಡತಿಗೆ ಹೊದಿಸುತ್ತಾನೆ. ಅದಕ್ಕೆ ಕಾವೇರಿಯು.

'ಶಾಲು ಯಾಕೆ?'

'ನಿನಗೆ ಥಂಡಿಯಾಗದಿರಲಿ ಎಂದು ತಂದಿದ್ದೇನೆ',

ಕಾವೇರಿ ತನಗೇ ಹೇಳಿಕೊಳ್ಳುವಂತೆ, ಆ ದಿನ ಶಾಲು ತೆಗೆದುಕೊಂಡಿರಲಿಲ್ಲ ಎಂದಳು.

'ಏನು ? ಯಾವ ದಿನ ?'

ಕಾವೇರಿ ಅವನ ಮಾತಿಗೆ ಕಿವಿ ಕೊಡಲಿಲ್ಲ

'ಎಲ್ಲಿಗೆ ಹೋಗೋಣ ಕಾವೇರಿ?,

'ಶ್ರೀರಂಗ ಪಟ್ಟಣ,

'ಸತೀಶ ಚಕಿತವಾಗಿ ಕೇಳಿದ ಶ್ರೀರಂಗಪಟ್ಟಣ'

'ಹೂಂ'

ಬೇಡ ಕಾವೇರಿ, ಈ ದಿನ ಇಲ್ಲಿಯೇ ಎಲ್ಲಾದರೂ ಸುತು ಹಾಕಿಕೊಂಡು ಬರೋಣ,

'ಬೇಡ ಅಲ್ಲಿಗೆ ಹೋಗೋಣ'

'ನೀನು ಕೊಂಚ ಹುಷರಾದ ಮೇಲೆ ಅಶೋಕನನ್ನೇ ಕರೆದು ಕೊಂಡು ಹೋಗಿ ದೇವರ ದರ್ಶನ ಮಾಡಿಕೊಂಡು ಬರೋಣ ಈ ದಿನ ಬೇಡ ',

'ದೇವರ ದರ್ಶನ ನಿಮ್ಮಂಥವರಿಗೆಲ್ಲ, ನನಗೆ ದೇವರ ದರ್ಶನ ಬೇಕಿಲ್ಲ', ಎಂದು ನುಡಿಯುತ್ತಾಳೆ. ಈ ಮಾತಿನಲ್ಲಿ ತಾನು ತಪ್ಪಿತಸ್ಥೆ ಎಂಬ ಭಾವನೆ ಅವಳನ್ನು ಕಾಡುತ್ತಿರುವುದು ಕಾಣುತ್ತದೆ.

ಶ್ರೀರಂಗ ಪಟ್ಟಣದ ಸರಹದ್ದಿಗೆ ಬಂದ ಕೂಡಲೇ ಕಾವೇರಿ ಗಂಡನ ಕಡೆಗೆ ತಿರುಗಿ.

ನದಿ ತೀರಕ್ಕೆ ಹೊಗೋಣ' ಎಂದಳು,

ಕಾವೇರಿಯು ಏನುಹೇಳಿದರೂ ಪ್ರತಿಭಟಿಸಬಾರದು ಎಂದು ಸತೀಶ ತೀರ್ಮಾನಿಸಿ ಕಾರನ್ನು ನದಿಯ ತೀರಕ್ಕೆ ನಡೆಸಿದ, ಕಾವೇರಿ ನದಿಯನ್ನು ನೋಡಿ ಎಳೆಯ ಹುಡುಗಿಯಂತೆ ಉತ್ಸಾಹದಿಂದ ಮರಳನ್ನು ತುಳಿಯುತ್ತಾ ಓಡಾಡಿದಳು ಕಾಲನ್ನು ಮರಳಿನಲ್ಲಿ ಹುದುಗಿ ಕಪ್ಪೆಗೂಡು ಕಟ್ಟಿದಳು. ನಂತರ ಅದನ್ನು ತಾನೇ ತುಳಿದು ಹಾಳುಮಾಡಿದಳು, ಕಾವೇರಿ ನದಿ ನೀರಿನಲ್ಲಿ ಇಳಿದು ಮೈಮರೆತು ಆಟವಾಡುತ್ತಿದ್ದಳು. ಸತೀಶ

ಕಾವೇರಿ ತಣ್ಣೀರಿನಲ್ಲಿ ಆಟವಾಡಬೇಡ, ಶೀತವಾಗುತ್ತದೆ. ಬಾ ಮೇಲಕ್ಕೆ

'ಊಹುಃ'

ಹೀಗೆಲ್ಲಾ ಹಟ ಮಾಡಬಾರದ ಅಶೋಕ ನಿನ್ನ ನೆನೆದು ಅಳುತ್ತಿರಬಹುದು ಮೈಸೂರಿಗೆ ತಿರುಗಿ ಹೋಗೋಣ',

ಎಂದರೂ ಅವಳಲ್ಲಿ ಯಾವ ಪ್ರತಿಕ್ರಿಯೆ ತೋರುವುದಿಲ್ಲ, ನದಿಯ ನೀರೀನಲ್ಲಿ ಆಟವೆಲ್ಲಾ ಆಡಿ ದಡಕ್ಕೆ ಬಂದು ಮರಳಿನ ಮೇಲೆ ಕುಳಿತು ಕೈಗಳನ್ನು ಮರಳಿನ ಮೇಲೆ ಊರಿ 'ಎಷ್ಟು ಚೆನ್ನಾಗಿದೆ'-ಎಂದಳು.
'ಮನೆಗೆ ಹೋಗೋಣ ಕಾವೇರಿ, ಆಗಲೇ ಎಂಟು ಗಂಟೆಯ ಸಮಯವಾಯಿತು ಎಂದ,
ಬೆಚ್ಚಿ ಬಿದ್ದ ಕಾವೇರಿ 'ಆಂ' ಎಂಟು ಗಂಟೆಯೇ?- ಎನ್ನುತ್ತಾ ಅಳತೊಡಗಿದಳು.

ಕಳೆದು ಹೋಗಿದೆ, ಕಳೆದು ಹೋಗಿದೆ - ಎನ್ನತ್ತಾ ಕಾವೇರಿ ಮರಳನ್ನು ಬಗೆದು ಬಗೆದು ಕಳೆದು ಕೊಂಡಿದ್ದ ವಸ್ತುವನ್ನು ಹುಡುಕ ತೊಡಗಿದಳು.
ಏನು ಕಳೆದು ಕೊಂಡೆ?, ಸತೀಶ ಅಚ್ಚರಿಯಿಂದ ಕೇಳಿದ ಹಾಗೂ ಕೇಳುತ್ತಾ ತನ್ನ ಕಣ್ಣುಗಳನ್ನು ಕಾವೇರಿಯ ಕಿವಿ, ಕೊರಳು,ಕೈಗಳ ಮೇಲೆ ಓಡಾಡಿಸಿದ ಅವಳ ಮೈಮೇಲಿನ ಯಾವ ಒಡವೆಗಳು ಕಳವಾದಂತೆ ತೋರಲು, ಆದರೂ ಕಾವೇರಿ ಅತ್ಯಮೂಲ್ಯವಾದ ವಸ್ಸುವನ್ನು ಕಳೆದುಕೊಂಡವಳಂತೆ ಅಳುತ್ತಾ ಮರಳನ್ನು ಕೆದಕಿ ಕೆದಕಿ ಕಳೆದು ಹೋಗಿದ್ದ ಪದಾರ್ಥವನ್ನ ತಡಕಾಡುತ್ತಿದ್ದಳು. ಸತೀಶನಿಗೆ ಬೇಸರವಾಗಿ ಗಧರಿಸಿದ ದನಿಯಲ್ಲಿ
'ಏನು ಕಳೆಯಿತು? ಅದನ್ನಾದರೂ ಹೇಳು:- ಎಂದ

ಕಾವೇರಿ ಮರು ಮಾತನಾಡಲು ಬಹಳ ಕಾಲದಿಂದಲೂ ಕೂಡಿಟ್ಟಿದ್ದ ಹಣವನ್ನು ಸಮಯ ಕಾದು ದುರಾತ್ಮರು ಹಾರಿಸಿದರೆ ಸಂಕಟಪಡುವ ಲೋಭಿಯಂತೆ ಕಾವೇರಿ ಸಂಕಟಪಡುತ್ತಾ ಅಲ್ಲಿ ಇಲ್ಲಿ ಮರಳನ್ನು ಬಗೆಯುತ್ತಿದ್ದಳು.
ನೀವೂ ನೋಡಿ ನಿಮ್ಮ ಕೈಗೇನಾದರೂ ಸಿಕ್ಕುತ್ತದೆಯೇ?:- ಎಂದು ಕಾವೇರಿ ಗಂಡನಿಗೆ ಹೇಳಿದಳು.
ಆಗ ಅವಳ ಮುಖದಲ್ಲಿ ಉನ್ಮಾದ ಕುಣಿಯುತ್ತಿದ್ದುದ್ದನ್ನು ಸತೀಶ ಬೆಳದಿಂಗಳಿನ ನಸು ಬೆಳಕಿನಲ್ಲಿಯೂ ನೋಡಿದ, ಕಾವೇರಿ ಅತ್ಯಂತ ನಿರಾಶೆಯಿಂದ ಗಂಡನ ಕಡೆ ತಿರುಗಿ.

ಸಿಕ್ಕಲು ಕಳೆದು ಹೋದದ್ದು ಕಳೆದೇ ಹೋಯಿತು- ಎಂದಳು, ಅವಳ ದನಿಯಲ್ಲಿದ್ದ ನಿರಾಶೆಯ ಆಳ ಅವನನ್ನು ಚಕಿತಗೊಳಿಸಿತು ಅವನು ಕಾವೇರಿ ಹತ್ತಿರ ಬಂದು 'ಹೋದರೆ ಹೋಗಲಿ ಬಿಡು ಕಾವೇರಿ ನೀನು ಕಳೆದು ಕೊಂಡಿರುವುದು ಏನು ಹೇಳು? ಅದಕ್ಕೆ ಎಷ್ಟು ದುಡ್ಡು ಖರ್ಚಾದರೂ ಚಿಂತೆಯಿಲ್ಲ ನಾನು ಅದನ್ನು ಮತ್ತೆ ತರಿಸಿ ಕೊಡುತ್ತೇನೆ'-ಎಂದ

ಹಾಗೆಲ್ಲ ದುಡ್ಡಿಗೆ ಸಿಗೊಲ್ಲ ಅದು ಎಂದಳು ಬಿಕ್ಕುತ್ತಾ ಕಾವೇರಿ ಹೋದರೆ ಹೋಗಲಿ ಅದೊಂದು ಕೊರತೆ ನಷ್ಟ ಎಂದು ನೀನು ಭಾವಿಸಬೇಡ, ನೀನು ಅತ್ತರೆ, ನನಗೆ ದುಃಖ ವಾಗುತ್ತದೆ. ಎಂದು ಸಮಾಧಾನಿಸುತ್ತಾನೆ.

ಕಾವೇರಿಯ ದೇಹದಲ್ಲಿ ಹೊಸ ಅಪಚರಿತ ವ್ಯಕ್ತಿಯೊಬ್ಬ ಪ್ರವೇಶ ಮಾಡಿರುವಂತೆ ಸತೀಶನಿಗೆ ತೋರಿತು. ಮತ್ತೆ ಪೌರ್ಣಮಿಯ ದಿನ ಬಂತು ಎಂದಿನಂತೆ ಕಾವೇರಿ ಗಂಡನನ್ನು ಬಲವಂತಪಡಿಸಿ ಶ್ರೀರಂಗ ಪಟ್ಟಣಕ್ಕೆ ಹೊರಡಿಸಿದಳು. ಸತೀಶ ಒಪ್ಪದಿದ್ದನು ಕಂಡು ಕಾವೇರಿ ದೈನ್ಯದಿಂದ ಗಂಡನ ಕಾಲು ಹಿಡಿದು ಬೇಡಿಕೊಂಡಳು. ಗಂಡನ ಮೇಲೆ ಜೋರು ಮಾಡಿದಳು.

ಅವಳ ಹಠ ನೋಡಿ ಸತೀಶ ಕಾವೇರಿಗೆ ಎರಡು ಏಟು ಸಹ ಹಾಕಿದ ಮರುಗಳಿಗೆಯೇ ಮರುಗಿದನು. ಕಾವೇರಿಯನ್ನು ಹೊಡೆದಿದ್ದಾಕ್ಕಾಗಿ ಪ್ರಾಯಶ್ಚಿತವಾದಂತೆ ಕಾವೇರಿಯನ್ನು ಶ್ರೀರಂಗಪಟ್ಟಣಕ್ಕೆ ಕರೆದು ಕೊಂಡು ಹೋದ.

ಒಂದು ತಿಂಗಳ ಹಿಂದೆ ನದೀ ತೀರದಲ್ಲಿ ಕಾವೇರಿ ಹೇಗೆ ವರ್ತಿಸಿದಳೋ ಈ ಬಾರಿಯು ಕಾವೇರಿ ಹಾಗೆಯೇ ವರ್ತಿಸಿದಳು. 'ಕಳೆದು ಹೋಯಿತು', 'ಕಳೆದು ಹೋಯಿತು' ಎಂದು ಹೇಳಿಕೊಂಡು ಸರ್ವಸ್ವವನ್ನು ಕಳೆದುಕೊಂಡವಳಂತೆ ,ಮರಳಿನ ಕಣ ಕಣವನ್ನು ಬಗೆದು ನೋಡಿದಳು. ಕಾವೇರಿ ಕಳೆದುಕೊಂಡ ವಸ್ತುವನ್ನು ಗಾಳಿಯಲ್ಲಿಯೂ ಹುಡುಕಿ ನೋಡಿದಳು.
ಮೂರನೆಯ ಪೂರ್ಣಿಮೆಯ ದಿನ ಸತೀಶ ಎಂದಿನಂತೆ ಆ ದಿನ ಮನೆಗೆ ಬಂದಿರಲಿಲ್ಲ. ಮನೆಗೆ ಹೋದರೆ ಹೆಂಡತಿ ಹಠ ಹಿಡಿಯುವಳೆಂಬುದು ಅವನಿಗೆ ತಿಳಿದಿತ್ತು. ಬೆಳದಿಂಗಳ ದಿನವನ್ನು ಪ್ರಣಯಿಗಳು ಕಾತರದಿಂದ ಎದುರು ನೋಡಬಹುದು. ಕವಿಗಳು ಬೆಳದಿಂಗಳು ಚಂದ್ರನ ಮೆಲೆ ನೂರಾರು ಕವಿತೆಗಳನ್ನು ರಚಿಸುವಂತೆ ಸತೀಶ ಚಂದ್ರನನ್ನು ಶಪಿಸುತ್ತಿದ್ದ.
ಸತೀಶ ತನ್ನ ಜಾಣತನಕ್ಕೆ ತಾನೇ ತಲೆತೂಗಿ ಆಫೀಸು ಬಿಟ್ಟೊಡನೆ ನೇರವಾಗಿ ಹೋಟೆಲ್‌ಗೆ ಹೋಗಿ ತಿಂಡಿ ತಿಂದು ಕಾಫಿ ಕುಡಿದು ಸಮಯ ಕಳೆಯಲು ಬಂದು ಚಿತ್ರಮಂದಿರದೊಳಗೆ ಕುಳಿತುಕೊಂಡ, ರಾತ್ರಿ ಒಂಭತ್ತುವರೆಗಂಟೆಗೆ ಮನೆಗೆ ಹೋದ ತಾನು ತಡವಾಗಿ ಹೋದರೆ ಕಾವೇರಿ ಮಲಗಿರುವಳು. ಶ್ರೀರಂಗಪಟ್ಟಣಕ್ಕೆ ಕರೆದುಕೊಂಡು ಹೋಗಿ ಎಂದು ಹಠಮಾಡಳು ಎಂಬುದು ಸತೀಶನ ಊಹೆಯಾಗಿತ್ತು.
ಆದರೆ ಅಲ್ಲಿ ನಡೆದದ್ದೆ ಬೇರೆಯಾಗಿರುತ್ತದೆ. ಮಗನ ಆಗಮನವನ್ನು ಎದುರುನೋಡುತ್ತಿದ್ದ ತಾಯಿ
"ಕಾವೇರಿ ಇಲ್ಲ"
ಸಂಜೆ ಐದು ಗಂಟೆಗೆ ಅಲಂಕಾರ ಮಾಡಿಕೊಂಡು ಎಲ್ಲಿಗೋ ಹೊರಟುಹೋಗಿದ್ದಾಳೆ.ಎಲ್ಲಿ ಪ್ರಾಣ ಕಳೆದುಕೊಂಡುಬಿಟ್ಟಳೋ ಎಂದು ನನಗೆ ಆತಂಕವಾಗಿದೆ. ಎಂದು ಗಾಬರಿಯಿಂದ ಹೇಳಿದಳು.
ಕಾವೇರಿ ಎಲ್ಲಿಗೆ ಹೋಗಿದ್ದಾಳೆಂದು ಸತೀಶನಿಗೆ ಚೆನ್ನಾಗಿ ತಿಳಿದಿತ್ತು. .ಶ್ರೀರಂಗಪಟ್ಟಣದ ಹಾದಿಯಲ್ಲಿ
ಸತೀಶ ಎರಡು ಪಕ್ಕಗಳಲ್ಲೂ ನೋಡುತ್ತ ಕಾರನ್ನು ನಿಧಾನವಾಗಿ ನಡೆಸಿದ. ಮೈಸೂರಿನಿಂದ ಮೂರು ಮೈಲಿ ದೂರದಲ್ಲಿದ್ದ ರಸ್ತೆಯ ಎಡಭಾಗದಲ್ಲಿ ಮಬ್ಬು ಬೆಳಕಿನಲ್ಲಿ ಬಿಳಿಯ ಸೀರೆಯುಟ್ಟು ಹೋಗುತ್ತಿದ್ದ ಕಾವೇರಿಯನ್ನು ಸತೀಶ ಗುರ್ತಿಸಿದ
ಕಾವೇರಿಯ ಹತ್ತಿರ ಕಾರು ನಿಲ್ಲಿಸಿ 'ಕಾವೇರಿ' ಎಂದ. ಕಾವೇರಿ ಹಿಂತಿರುಗಿ ನೋಡಿದಳು
ಬಾ ಹೋಗೋಣ

'ನದಿತೀರಕ್ಕೆ ಕರೆದುಕೊಂಡು ಹೋಗಬೇಕು.

'ಆಗಲಿ ಕಾರು ಹತ್ತು'

ಕಾವೇರಿ ಕಾರು ಹತ್ತಿ ಕುಳಿತಳು ಸತೀಶ ಕಾರಿನ ಗಾಜು ಹಾಕಿ ಲಾಕ್ ಮಾಡಿ ಮನೆಯ ಕಡೆ ಕಾರನ್ನು ತಿರುಗಿಸಿದ
'ಅಲ್ಲಿಗೆ ಹೋಗೋಣ' ಎಂದಳು ಕಾವೇರಿ. ಮಗುವನ್ನು ಸಂತೈಸುವಂತೆ ಸತೀಶ ಮೃದುವಾಗಿ ಹೇಳಿದ.
'ಕತ್ತಲೆಯಲ್ಲಿ ನಾನು ಕಳೆದುಕೊಂಡಿದ್ದು'
'ನೀನು ಕತ್ತಲೆಯಲ್ಲಿ ಕಳೆದುಕೊಂಡಿದ್ದನ್ನು ಬೆಳಕಿರುವಾಗ ಹುಡುಕಿದರೆ ಸಿಕ್ಕುತ್ತದೆ.

ಕಾವೇರಿ ತನಗೆ ತಾನೆ ಏನೋ ಗೊಣಗಿಕೊಂಡಳು.

'Veni vedi vici'

ಕಾವೇರಿ ಗೊಣಗಿದ್ದು ಸತೀಶನಿಗೆ ಸ್ಪಷ್ಟವಾಗಿ ಕೇಳಲಿಲ್ಲ ಅವನು ಹಿಂತಿರುಗಿ ಏನಂದೆ? ಎಂದ , ಕಾವೇರಿಯಿಂದ ಉತ್ತರ ಬರಲಿಲ್ಲ.
ಇನ್ನೂ ತಡಮಾಡುವದರಲ್ಲಿ ಯಾವ ಪ್ರಯೋಜನವೂ ಇಲ್ಲವೆಂದು ಸತೀಶನಿಗೆ ಮನವರಿಕೆಯಾಯಿತು. ಮಾನಸಿಕ ಚಿಕಿತ್ಸಾಲಯಕ್ಕೆ ಕರೆದ್ದೊಯ್ದನು.
ಬೆಂಗಳೂರಿನ ಮಾನಸಿಕ ಚಿಕಿತ್ಸಾಲಯದಲ್ಲಿ ಎರಡು ವರ್ಷ ಚಿಕಿತ್ಸೆ ಪಡೆದು ಸಂಪೂರ್ಣ ಗುಣವಾಗಿ ತನ್ನ ಪತಿ ಮಕ್ಕಳು ಆಶೋಕ, ಅರವಿಂದ, ಅತ್ತೆಯನ್ನು ನೋಡಲು ತನ್ನ ಕನಸಿನ ಅರಮನೆ 'ಚಂದ್ರಹಾಸ 'ವನ್ನು ನೋಡಲು ಕಾತರತೆಯಿಂದ ಬರುತ್ತಾಳೆ.
'ಚಂದ್ರಹಾಸ ವನ್ನು ಕಾವೇರಿ ದೂರದಿಂದಲೇ ಗುರ್ತಿಸಿದಳು.ಸಂಜೆಯ ಹೊಂಬೆಳಕಿನಲ್ಲಿ
ಕಾವೇರಿಯ ಕನಸಿನ ಸೌಧ ತಲೆ ಎತ್ತಿ ಮರೆಯುತ್ತಿತ್ತು
ಆದರೆ ಆದರೆ?
ಕಾಂಪೌಂಡಿನ ಗೇಟುಗಳಿಗೆ ಹಬ್ಬಿಸಿದ್ದ ,ಬೋಗನ್‌ವಿಲ್ಲೈ ಬಳ್ಳಿಯೆಲ್ಲಿ? ಮನೆಯ ಮುಖ ಮಂಟಪವನ್ನು ತಬ್ಬಿ ನಿಂತಿದ್ದ ಜಾಜೀ ಲತೆ ಎಲ್ಲಿ? ಒಡವೆಗಳನ್ನು ಹಾಕಿದ ಹೆಂಗಸಿನಂತೆ 'ಚಂದ್ರಹಾಸ' ಕಾವೇರಿಯ ಕಣ್ಣಿಗೆ ಬೋಳಾಗಿ ಕಂಡಿತು. 'ಚಂದ್ರಹಾಸ'ನನ್ನು ನೋಡಿ ಕಾವೇರಿಯ ಹೃದಯ ಹಿಂಡಿದ ಹಾಗಾಯಿತು.

ಹುಚ್ಚಾಸ್ಪತ್ರೆಯಿಂದ ಗುಣಮುಖಳಾಗಿ ಬಂದವಳನ್ನು ಹಿಂದಿನ ಕಾವೇರಿಯಂತೆ ನೋಡದೆ ಹುಚ್ಚಿ ಎಂಬ ಭಾವನೆಯಲ್ಲಿ ನೋಡಲು ಎಲ್ಲರೂ ಪ್ರಾರಂಭಿಸುತ್ತಾರೆ. ಕಾವೇರಿ ತನ್ನ ಅರಮನೆಯ ಸೌಂದರ್ಯ ಸೂರೆಯಾಗಿರುವದನ್ನು ಹನಿಗಣ್ಣಾಗಿ ನೋಡುತ್ತಿರುವಾಗ ಪಕ್ಕದ ಮನೆಯ ಅರೆಮುಚ್ಚಿದ ಕಿಟಕಿ ಹಿಂದಿನಿಂದ ಮನೆಯಾಕೆ ತನ್ನನ್ನೇ ದಿಟ್ಟಿಸಿ ನೋಡುತ್ತಿರುವುದನ್ನು ಕಾವೇರಿ ನೋಡಿದಳು. ಆಕೆ ಕಾವೇರಿಯ ಪರಿಚಿತಳೇ, ಅವಳನ್ನು ಮಾತಾಡಿಸುವ ಸಲುವಾಗಿ ಕಾವೇರಿ ಮುಗುಳ್ನನಗೆ ಬೀರಿ ಕೈ ಅಲುಗಿಸಿದಳು. ಆದರೆ ಆಕೆ ಕಾವೇರಿಯ ಸ್ವಾಗತವನ್ನು ಹಿಂತಿರುಗಿಸದೆ ಅವಳ ಕಣ್ಣುತಪ್ಪಿಸಿ ಕಿಟಕಿಯ ಹಿಂದೆ ಮರೆಯಾದಳು.

ಸತೀಶ ಪಕ್ಕದ ಮನೆಯಾಕೆಯ ಇಣುಕು ನೋಟವನ್ನು ಗಮನಿಸಿರಲಿಲ್ಲ. ಅವನು ಕಾವೇರಿಯ ನಗೆ, ಕೈ ಅಲುಗಿಸುವಿಕೆಯನ್ನು ಮಾತ್ರ ಗಮನಿಸಿ ಬೆರಗಿನಿಂದ ಕಾವೇರಿಯ ಕಡೆ ನೋಡಿದ. ಆ ಮನೆಯ ಶಾರದಮ್ಮ ಕಾವೇರಿಗೂ ಪರಿಚಯ. ಹಿಂದೆ ಚೆನ್ನಾಗಿ ಮಾತಾಡಿಸುತ್ತಿದ್ದರು.ಆದರೆ ಇಂದು ಮಾನಸಿಕ ಆಸ್ಪತ್ರೆಯಿಂದ ಬಂದಿದ್ದಿಳು ಎಂಬ ಕಾರಣಕ್ಕೆ ಆವಳನ್ನು ಮಾತಾನಾಡಿಸಲು ಹಿಂಜರಿಯುತ್ತಿದ್ದರು.

ಕಾವೇರಿ ಮನೆಯಲ್ಲಿಲ್ಲದ್ದರಿಂದ ಅರವಿಂದ ಮತ್ತು ಅಶೋಕನನ್ನು ನೋಡಿಕೊಳ್ಳಲು ಸತೀಶನ ಅಕ್ಕ ವಿಜಯಾಳನ್ನು ಮನೆಗೆ ಕರೆಯಿಸಿಕೊಂಡಿದ್ದರು. ಮನೆಯ ಎಲ್ಲಾ ಜವಾಬ್ದಾರಿಯಲ್ಲಿ ವಿಜಯಾ ಪಾತ್ರಳಾಗಿದ್ದಳು. ಎಲ್ಲಾ ಕೆಲಸವು ವಿಜಯಾಳ ಹೇಳಿಕೆಯಂತೆ ಸಾಗಿತ್ತು. ಅಷ್ಟೇ ಅಲ್ಲದೇ

ಎರಡು ವರ್ಷದಲ್ಲಿ  ಅರವಿಂದ ಮತ್ತು ಅಶೋಕ ಕಾವೇರಿಯನ್ನು ಸಂಪೂರ್ಣವಾಗಿ ಮರೆತು ವಿಜಯಾಳನ್ನು ತಾಯಿಯಂತೆ ಹೊಂದಿಕೊಂಡಿದ್ದರು.

ಆದರೆ ತಾಯಿ ತನ್ನ ಮಕ್ಕಳನ್ನು ಎರಡು ವರ್ಷಬಿಟ್ಟಿದ್ದ ತಾಯಿಹೃದಯ ಮಕ್ಕಳನ್ನು ನೋಡಲು ಮುದ್ದಿಸಲು ಹಾತೊರೆಯುತ್ತಿರುತ್ತದೆ. ಆದರೆ ಮಕ್ಕಳು ಮನೆಯ ಆಳುಗಳಿಂದ ಪ್ರಾರಂಭವಾದ ತಿರಾಸ್ಕಾರ ಭಾವನೆ ತನ್ನ ಪ್ರೀತಿಯ ಪತಿ ಸತೀಶನು ಕಾವೇರಿಯನ್ನು ದೂರವಿಡಲು ಮುಂದಾಗುತ್ತಾನೆ. ಇದರಿಂದ ಕಾವೇರಿಗೆ ತನ್ನವರು ಯಾರಿಲ್ಲ ಎಂಬ ಭಾವನೆ ಕಾಡತೊಡಗಿತು. ಅರವಿಂದ ಅಶೋಕನನ್ನು ಕಂಡ ಕಾವೇರಿ ಬಂದು ಕೈಯಿಂದ ಅರವಿಂದನ್ನನು ತಬ್ಬಿಕೊಂಡು ಮತ್ತೊಂದು ಕೈಯಿಂದ ಅಶೋಕನ ಮುಖವನ್ನು ತನ್ನೆಡೆಗೆ ಸೆಳೆದುಕೊಂಡು ಮುತ್ತಿಟ್ಟಳು ಕಾವೇರಿಯ ಅಪ್ಪುಗೆಯನ್ನು ಅರವಿಂದ ಮೌನವಾಗಿ ಕೊಸಡಿ ತಪ್ಪಿಸಿಕೊಂಡ, ಅಶೋಕ ಗಾಬರಿಯಿಂದ ಚೀರಿ ಕಾವೇರಿಯ ಮುತ್ತನ್ನು ತಿರಾಸ್ಕರಿಸಿದ್ದರಿಂದ ಕಾವೇರಿಯ ಕೆನ್ನೆಗೆ ಹೊಡೆದಂತಾಯಿತು. ಇದನ್ನು ನೋಡುತ್ತಿದ್ದ ಸತೀಶ ಎರಡು ವರ್ಷವಾಗಿದೆಯಲ್ಲಾ ಮರೆತು ಬಿಟ್ಟಿದ್ದಾರೆ. ಎರೆಡು ದಿನ ಕಳೆದರೆ ಸರಿ ಹೋಗುತ್ತಾರೆ ಎಂದು ಸಮಾಧಾನ ಮಾಡಲು ಪ್ರಯತ್ನಿಸಿದ. ಮಗು ತಾಯಿಯನ್ನು ಮರೆತರೆ ತಾಯಿಗಾಗುವ ವೇದನೆ ಎಂತಹುದು ಎಂಬುದನ್ನು ಸತೀಶ ಹೇಗೆ ಅರಿಯಬಲ್ಲ?

ಮಕ್ಕಳಿಂದ ಪ್ರೀತಿ ಸಿಗಲಿಲ್ಲವೆಂದು ಬೇಸರದಲ್ಲಿದ್ದ ಕಾವೇರಿಗೆ ಸತೀಶನು ಅವಳಿಂದ ದೂರವಿರಲು ಪ್ರಯತ್ನಸುತ್ತಾನೆ. ಕಾವೇರಿ ಆಸ್ಪತ್ರೆಯಿಂದ ಮನೆಗೆ ಮರಳಿದ ದಿನ ಗಂಡನೊಡನೆ ಹಿಂದಿನಂತೆ ಮಲಗಲು ಕಾಯುತ್ತಿರುತ್ತಾಳೆ. ಆದರೆ ಸತೀಶ ಅದನ್ನು ತಡೆಯುವುದಕ್ಕಾಗಿ ಪುಸ್ತಕ ಓದುವ ನೆಪಮಾಡಿಕೊಂಡು ಕುಳಿತ್ತಿರುತ್ತಾನೆ. ಕಾವೇರಿ ತನಗಾಗಿ ಕಾಯುತ್ತಿರುವುದನ್ನು ಗಮನಿಸಿದ ಸತೀಶ ಕೊನೆಗೆ ತಾನೇ ಸೋತು

'ಕಾವೇರಿ ಮಲಗಿಕೋ ಹೋಗು' ಎಂದ

'ಮಲಗಿಕೋ ಹೋಗು ಎಂದವನು ಒಮ್ಮೆ ತನ್ನ ಗಲ್ಲ ಹಿಡಿದು ಹೇಳಿದ್ದರೆ ಆ ರಾತ್ರಿಯ ಮಟ್ಟಿಗೆ ಕಾವೇರಿ ಪತಿಯಿಂದ ಹೆಚ್ಚಿಗೆ ನಿರೀಕ್ಷಿಸದಿದ್ದರೂ ಒಂದು ಸಮಾಧಾನದ ನುಡಿ, ಒಂದು ಪ್ರೀತಿಯ ನೆವರಿಕೆ, ಒಂದು ವಿಶ್ವಾಸದ ನೋಟವನ್ನು ಅವನಿಂದ ನಿರೀಕ್ಷಿಸಿದ್ದಳು.

ಮೊದಲಿನಿಂದಲೂ ಸತೀಶನ ಆರಾಧನೆ ಒಲೈಸುವಿಕೆಗೆ ಮಾತ್ರ ಕಾವೇರಿಯ ಹೃದಯ ಹೊಂದಿಕೊಂಡಿತ್ತು. ಪತಿಯ ಔದಾಸೀನ್ಯವನ್ನು ಮೊದಲನೆ ಬಾರಿ ಅನುಭವಿಸಿದಾಗ ಅವಳ ಜೀವ ತತ್ತರಿಸಿತು.

ಕಾವೇರಿ ಗಂಡನ ನಿರೀಕ್ಷೆಯಲ್ಲೇ ರೂಮಿನಲ್ಲಿ ಮಲಗಿರುವಾಗ ಸತೀಶ ಕಾವೇರಿ ರೂಮಿನ ಬಾಗಿಲು ತಟ್ಟಿದ ಕಾವೇರಿ ಮುಖದ ಮೇಲೆ ಆಸೆಯ ನಿರೀಕ್ಷೆಯ ಕನಸು ನಲಿದಾಡುತ್ತಿರುವುದನ್ನು ನೋಡಿ ಸತೀಶ ಹಿಂಜರಿದು ಹೇಳಿದ

'ಅಗುಳಿ ಹಾಕಿಕೊಳ್ಳ ಬೇಡ ಕಾವೇರಿ, ಹಾಗೆ ಮಲಗು'

ಎಂದ ಕಾವೇರಿಯ ಆಸೆಯ ಕುಡಿ ಕಮರಿ ಹೋಯಿತು
ರೂಮಿನ ಅಗುಳಿ ಹಾಕಿಕೊಂಡು ಕಾವೇರಿ ಏನಾದರೂ ಮಾಡಿಕೊಂಡರೆ? ಅವಳ ಬುದ್ದಿ ಒಂದೇ ಸಮಾನಾಗಿರುತ್ತದೆ ಎಂದು ಯಾವ ಧೈರ್ಯಯಿಲ್ಲ ಎಂದು ಅವಳ ರೂಮಿನ ಬಾಗಿಲು ತಟ್ಟಿರುತ್ತಾನೆ.

ನಾಲ್ಕಾರು ದಿನಗಳ ಕಾಲ ವಿಶ್ರಾಂತಿ ಪಡೆದು ತಾನು ಮತ್ತೆ ಮೊದಲಿನಂತೆ ಸಂಸಾರ ರಥದ ಲಗಾಮನ್ನು ತನ್ನ ಕೈಗೆ ತೆಗೆದು ಕೊಳ್ಳಬೇಕು ಎಂದು ನಿರ್ಧರಿಸಿ ತನ್ನ ಸಂಸಾರದ ಹೊಣೆಯನ್ನು ವಿಜಯತ್ತೆ ಎಷ್ಟು ದಿನ ಹೊರಲು ಸಾಧ್ಯ ನಾಳೆಯಿಂದ ಅರವಿಂದ ಅಶೋಕರನ್ನು ಮತ್ತೆ ತನ್ನವರಾಗಿ ಮಾಡಿಕೊಳ್ಳ ಬೇಕು ತಾನು ಮತ್ತೆ ಮೊದಲಿನಂತೆ 'ಚಂದ್ರಹಾಸ'ದ ಒಡತಿಯಾಗಬೇಕು ತಾನು ಮತ್ತೆ ಸತೀಶನ ಹೃದಯ ಸಾಮ್ರಾಜ್ಞಿಯಾಗಬೇಕು ಎಂಬ ಸುಖದ ಯೋಚನೆಯಲ್ಲಿ ಈ ನನ್ನ ಕನಸು ನೆರವೇರಿಯೆ ತೀರುತ್ತದೆ ಎಂಬ ಯೋಚನೆಯಲ್ಲಿರುತ್ತಾಳೆ.

ಮಕ್ಕಳು ತನ್ನ ಪ್ರೀತಿಗೆ ಒಗೋಡದೆಯಿದ್ದಾಗ ಜೀವಂತವಾಗಿ ಅವರನ್ನು ತನ್ನವರನ್ನಾಗಿ ಮಾಡಿಕೊಳ್ಳಲು ಯತ್ನಸಿ ಸೋಲುತ್ತಾಳೆ, ಮನೆಯ ಕೆಲಸದವರು ವಿನಾಕಾರಣ ಕಾವೇರಿಯ ಪ್ರತಿ ಹೆಜ್ಜೆಯಲ್ಲಿಯೂ ಹುಚ್ಚಿಯೆಂಬ ಹೆಜ್ಜೆಯನ್ನೆ ಹುಡುಕುತ್ತಾ ಹೋಗುತ್ತಿದ್ದರು ಆಸ್ಪತ್ರೆಯಿಂದ ಕಾವೇರಿ ತನ್ನ ತಲೆ ಕೂದಲು ಕೊಳೆಯಾಗಿದೆಯೆಂದು ಎಣ್ಣೆ ನೀರು ಸ್ನಾನ ಮಾಡಬೇಕೆಂದು ಎಣ್ಣೆ ಹುಡುಕಲು ಉಗ್ರಾಣಕ್ಕೆ ಹೋಗುತ್ತಾಳೆ, ಮನೆಯಲ್ಲಿ ಸಮಾನುಗಳೆಲ್ಲಾ ಸ್ಥಳಾಂತರ ಹೊಂದಿದ್ದವು ಹಿಂದೆ ಯಾವ ಸಾಮಾನು ಬೇಕಾದರೂ ಕನಸಿನಲ್ಲೂ ಸಹ ಕಾವೇರಿ ಎದ್ದು ಹೋಗಿ ತರುತ್ತಿದ್ದಳು ಆದರೆ ಈಗ ಅವಳಿಗೆ ಬೇಕಾದ ಒಂದು ಸಣ್ಣ ವಸ್ತು ತಟಕ್ಕನೆ ಅವಳಿಗೆ ಸಿಕ್ಕದೆ ಹುಡುಕುತ್ತಿರುವಾಗ ಕಾಣದೆ ಒಂದೆರಡು ಪಾತ್ರೆಗಳನ್ನು ಎಡವಿದಳು
ಎಣ್ಣೆಯ ಡಬ್ಬಿಯನ್ನು ಹಿಡಿದು ಕಾವೇರಿ ಹೊರಗೆ ಬಂದಾಗ ಅಡುಗೆಯವನೂ ಕೆಲಸದವಳೂ ಉಗ್ರಾಣದ ಹೊರಬಾಗಿಲಿನಲ್ಲಿ ನಿಂತು ಪಿಸ ಪಿಸನೆ ಮಾತನಾಡುತ್ತಿದ್ದರು. ಮನೆಯ ಯಜಮಾನಿಯಾಗಿ ಮನೆಯ ಪ್ರತಿಯೊಂದು ಕೆಲಸದಲ್ಲೂ ಯಜಮಾನಿಕೆಯನ್ನು ತೋರಿಸುತಿದ್ದ ಕಾವೇರಿ ಭಟ್ಟರು ನಿಂತಿರುವುದನ್ನು ಕಂಡು
'ಏನು ಭಟ್ಟರೇ? ಕಾವೇರಿ ಕೇಳಿದಳು.
'ಏನೂ ಇಲ್ಲಮ್ಮ.ಅಕ್ಕಿ ತಗೋಬೇಕಾಗಿತ್ತು.'
ಅಡಿಗೆ ಏನು ಮಾಡ್ತಿರಿ ?
'ವಿಜಯಮ್ಮ ಇನ್ನೂ ಏನು ಹೇಳಿಲ್ಲ ಎಂದಾಗ'.
ಯಜಮಾನಿ ತಾನೋ, ವಿಜಯಮ್ಮನೋ ಎಂದು ಭಟ್ಟರನ್ನು ಕೇಳುವ ತವಕವಾಯಿತು.

ಸತೀಶ, ಸುಂದರಮ್ಮ, ಮಕ್ಕಳು, ಭಟ್ಟರು ನಿಂಗಿ ಪ್ರತಿಯೊಬ್ಬರಿಗೂ ಈಗ ವಿಜಯಕ್ಕ 'ಅಮ್ಮನವರು' ಆಗಿದ್ದಳು ತಾನಿಲ್ಲದಾಗ ತನ್ನ ಮನೆಯನ್ನು ದಕ್ಷತೆಯಿಂದ ನೋಡಿಕೊಂಡ

ವಿಜಯಕ್ಕನಲ್ಲಿ ಕಾವೇರಿಗೆ ಕೃತಜ್ಞತೆ ಇತ್ತು .ಆದರೆ ತಾನೂ ಬಂದ ಮೇಲೂ ತನ್ನ ಸ್ಥಾನವನ್ನು ಬಿಟ್ಟು ಬಿಡದೆ ಯಜಮಾನಿಕೆ ನಡೆಸುತ್ತಿರುವ ಅವಳ ಭಂಡತನ ಕಾವೇರಿಗೆ ಸಹನವಾಗಲ್ಲಿಲ್ಲ.

ಒಂದು ಮಧ್ಯಾಹ್ನ ಊಟವಾದ ಮೇಲೆ ಕಾವೇರಿ ನಿದ್ದೆ ಮಾಡಿದಳು. ನಿದ್ದೆಯಿಂದ ಎದ್ದ ಮೇಲೆ ಅವಳು ಬೀರುವಿನಲ್ಲಿದ್ದ ಸೇಬಿನ ಹಣ್ಣನ್ನು ತಿನ್ನಲು ಹಣ್ಣನ್ನು ಕೈಗೆ ತೆಗೆದುಕೊಂಡಳು.ಮೊದಲಿಗಿಂತ ಕೃಶವಾಗಿದ್ದ ಅವಳ ಮೈಗೂಡಿಸಲು ಹಣ್ಣು,ಹಾಲು,ಟಾನಿಕ್ಕುಗಳನ್ನು ತೆಗೆದುಕೊಳ್ಳುತ್ತಿದ್ದಳು. ಹಣ್ಣನ್ನು ಕತ್ತರಿಸಲು ಅವಳಿಗೆ ಚಾಕು ಸಿಕ್ಕಲಿಲ್ಲ.ಬೆಳಗ್ಗೆ ಭಟ್ಟರು ಬ್ರೆಡ್‌ನ್ನು ಕೊಯ್ಯಲು ಚಾಕುವನ್ನು ತೆಗೆದುಕೊಂಡು ಹೋಗಿದ್ದನ್ನು ಕಾವೇರಿ ನೋಡಿದ್ದಳು.

ಆದುದರಿಂದ ಚಾಕು ಅಡಿಗೆಮನೆಯಲ್ಲಿರಬಹುದೆಂದು ಊಹಿಸಿ ಕಾವೇರಿ ಆಡುಗೆಯ ಮನೆಗೆ ಹೋದಳು.ಆಗ ಮಧ್ಯಾಹ್ನ ಸುಮಾರು ಒಂದು ಗಂಟೆಯಾಗಿರಬಹುದು ಹೊರಗೆ ಬಿಸಿಲು ರಣಗುಡುತ್ತಿತ್ತು. ಭಟ್ಟರು ಅದೇ ತಾನೇ ಊಟ ಮುಗಿಸಿ ಮುಸುರೆಯ ಪಾತ್ರೆಗಳನ್ನು ಹೊರಗೆ ಹಾಕುತ್ತಿದ್ದರು. ಏಕಾಏಕಿ ಕಾವೇರಿ ಅಡುಗೆ ಮನೆಗೆ ಬಂದಾಗ ಭಟ್ಟರ ಹೃದಯ ಕೊಂಚ ಅಳುಕುತ್ತಿತ್ತು.

ಕಾವೇರಿ ಅದೇ ತಾನೇ ನಿದ್ದೆ ಮಾಡಿ ಎದ್ದಿದ್ದಳು. ಅವಳ ತಲೆಗೂದಲು ಕೆದರಿ ಹಣೆಯ ಮೇಲೆ ಕವಿದು ಬಂದಿತ್ತು . ಅವಳು ಇನ್ನು ನಿದ್ದೆಯ ಮೋಡಿಯಲ್ಲಿದ್ದುದರಿಂದ ಕಣ್ಣುಗಳು ಕೆಂಪಾಗಿದ್ದವು.

'ಊಟ ಆಯಿತೇ ಭಟ್ಟರೇ? ಕಾವೇರಿ ಕೇಳಿದಳು.

'ಹೂಂ'

ಚಾಕು ಎಲ್ಲಿದೆ?

ಚಾಕು ಎಂದು ಕೇಳಿದೊಡನೆ ಭಟ್ಟರ ಎದೆ ಡವಡವನೆ ಹೊಡೆದುಕೊಂಡಿತು. ಮಟಮಟ ಮಧ್ನಾಹ್ನ ಅವಳಿಗೆ ಚಾಕುವಿನಿಂದ ಅಗತ್ಯವೇನಿದೆ?

ಸಾಲದ್ದುದಕ್ಕೆ ಯಾರ ಬಾಯಿಂದಲೋ ಭಟ್ಟರು ಕೇಳಿದ್ದರು. ಅಮಾವಾಸ್ಯೆ, ಪೌರ್ಣಮಿ, ಮಧ್ನಾಹ್ನ ಹುಚ್ಚು ಕೆರಳುತ್ತದೆ ಎಂದು.

ಇವತ್ತು ಮಧ್ನಾಹ್ನ ಹಾಗೂ,ಪೌರ್ಣಮಿ ಏನು ಗತಿ? ಹುಚ್ಚರಿಗೆ ನಾಲ್ಕಾಳಿಗೆ ಇರುವ ಬಲವಿರುತ್ತದೆ. ಎಂದವರು ಎಲ್ಲಿಂದಲ್ಲೋ ತಿಳುವಳಿಕೆ ಪಡೆದ್ದಿದ್ದರು. 'ತಿರುಪತಿ ತಿಮ್ಮಪ್ಪ ನೀನೆ ಗತಿಯಪ್ಪ' ಎಂದು ಭಟ್ಟರು ಅನನ್ಯ ಭಕ್ತಿಯಿಂದ ದೇವರನ್ನು ಮನಸ್ಸಿನಲ್ಲಿ ಪ್ರಾರ್ಥಿಸಿದರು.

ಧೈರ್ಯ ಮಾಡಿ ಕಾವೇರಿಯನ್ನು 'ಚಾಕು ಏಕಮ್ಮ' ಎಂದು ಕೇಳಿದರು.

'ನಿಮ್ಮಗ್ಯಾಕೆ ಅದೆಲ್ಲಾ' ಎಂದಳು ಕಾವೇರಿ ಧ್ವನಿಯೇರಿಸಿ

ಭಟ್ಟರಿಗೆ ಇನ್ನು ಸಂಶಯ ಉಳಿಯಲಿಲ್ಲ

'ಅಲ್ಲ ಸುಮ್ಮನೆ ಕೇಳಿದೆ' ಎಂದರು ಆತ

'ಚಾಕು ಯಾಕೆ ಎಂದರೆ ಏನು ಹೇಳೋಣ?'

'ಕತ್ತರಿಸೋಕೆ ಚಾಕು ಬೇಕು' ಎಂದಳು ಕಾವೇರಿ

ತನ್ನನ್ನು ಕತ್ತರಿಸಲು ಚಾಕು ಕೇಳುತ್ತಿರುವಳೆಂದೇ ಭಟ್ಟರು ಭಾವಿಸಿದ್ದರು. ಇನ್ನು ಚಿಕ್ಕಪುಟ್ಟ ಸಂಸಾರವಿರುವ ತಾವು ಹೀಗೆ ಒಂಟಿಯಾಗಿ ಹುಚ್ಚಿಯೊಬ್ಬಳ ಕೈಗೆ ಸಿಕ್ಕಿ ದುರ್ಮರಣಕ್ಕಿಡಾಗಬೇಕೆ? ಎಂದು ಭಯಬೀತರಾಗಿ ಮನೆಯಿಂದ ಹೊರಗೆ ಓಡುತ್ತಾರೆ. ಮನೆಗೆ ಬಂದು ಕಾವೇರಿ ಒಂದು ತಿಂಗಳಾದರೂ ಅಶೋಕನಿಗೆ ಕಾವೇರಿಯ ಮೇಲೆ ಆತ್ಮೀಯ ಭಾವ ಮೂಡಿರಲಿಲ್ಲ ಪ್ರೀತಿಯಿಂದ ಆಶೋಕನನ್ನು ಮಾತನಾಡಿಸಲು, ಮುಟ್ಟಿಸಲು ಹೋದರೆ ಚೀರುತ್ತಿದ್ದ ಕಾವೇರಿಯ ವಿಷಯವಾಗಿ ಹಿರಿಯರು ಮನೆಯಲ್ಲಿ ಮಾತನಾಡುತ್ತಿದುದ್ದನ್ನು ಆಶೋಕ ಕೇಳಿಸಿ ಕೊಳ್ಳುತ್ತಿದ್ದ ಅವರ ಮಾತುಗಳಿಂದ ಅವನು ಎಳೆಯ ಹೃದಯ ಹೆದರಿಕೊಳ್ಳುತ್ತಿತ್ತು.

ಅಶೋಕ ಚೀರುತ್ತಿರುವುದನ್ನು ನೋಡಿ ವಿಜಯಕ್ಕ ಎದ್ದು ಕಾವೇರಿಯ ಕೊಠಡಿಗೆ ಬಂದಳು. ಕಾವೇರಿಯ ಸಿಟ್ಟಿನ ಪ್ರವಾಹ ಮಗುವಿನಿಂದ ಅತ್ತಿಗೆಯ ಕಡೆ ತಿರುಗಿತು.ಆಕೆ ಅತ್ತಿಗೆಯನ್ನು ಆಕ್ಷೇಪಿಸಿದಳು.

"ನೀವೆಲ್ಲಾ ಸೇರಿ ನನ್ನ ಮಕ್ಕಳನ್ನು ನನ್ನಿಂದ ದೂರ ಮಾಡುತ್ತಿದ್ದೀರಿ".ಎಂದು ತನ್ನ ವ್ಯಥೆಯನ್ನು ಅನ್ಯಾಯವನ್ನು ಪ್ರತಿಭಟಿಸಿದಳು.ಈ ವಿಷಯವಾಗಿ ವಿಜಯಕ್ಕ ಮನೆಯಿಂದ ಹೊರಡಲು ಸಿದ್ದವಾದಳು.

ಮಾತಿಗೆ ಮುಂಚೆ ಕಾವೇರಿ, ಮಾತಿನ ಕೊನೆಯೊಂದಿಗೆ ಕಾವೇರಿ, ಮಾತಿನ ನಡುವೆ ಕಾವೇರಿ ಎಂದು ಬಾಯ್ತುಂಬ ಕರೆದು ತನ್ನ ಹೆಸರನ್ನು ಚಪ್ಪರಿಸುತ್ತಿದ್ದ ಸತೀಶ ಈಗ ದಿನಕ್ಕೆ ಒಂದು ಬಾರಿಯೂ ಕಾವೇರಿಯನ್ನೇ ನೆನೆಯುತ್ತಿರಲ್ಲಿಲ್ಲ .ಅರವಿಂದನ ಟೀಚರ್ ಕೂಡ ಮಗನನ್ನು ಆ ಬಗ್ಗೆ ಕೇಳಿರುತ್ತಾರೆ. ಕಾವೇರಿ ಹೋಗಿ ಉಪಾಧ್ಯಾಯಿನಿಯೊಂದಿಗೆ ನೀವು ಮಗುವನ್ನು ಕೇಳಿದ್ದು ತಪ್ಪು ಎಂದು ಹೇಳುತ್ತಾಳೆ. ಹೇಳುವ ಭರದಲ್ಲಿ ಸ್ವರ ತಾರಕಕ್ಕೆ ಹೋಗಿ ಅವರಿಗೆಲ್ಲಾ ಹುಚ್ಚು ಕಲ್ಪನೆಯನ್ನೇ ಗಟ್ಟಿ ಮಾಡುತ್ತಾರೆ. ಅಲ್ಲದೆ ತಂಗಿಗೆ ನಿಶ್ಚಯವಾಗಿದ್ದ ಮದುವೆ ಕಾವೇರಿಗೆ ಬುದ್ಧಿಭ್ರಮಣೆಯಾಗಿತ್ತು. ಅಂತವಳ ತಂಗಿಯನ್ನು ಮದುವೆಯಾಗುವುದು ಸಾಧ್ಯವಿಲ್ಲವೆಂದು ಮದುವೆ ನಿಂತುಹೋಗುತ್ತದೆ. ಇವರೆ ಸಾಕಿದ ಪ್ರಹ್ಲಾದನಾದರೂ ಒಪ್ಪಬಹುದೆಂದು ಮೈಸೂರಿನಲ್ಲೇ ಇದ್ದ ಅವನನ್ನು ಮನೆಗೆ ಕರೆಯಿಸಿಕೊಂಡು ಕೇಳುತ್ತಾರೆ. ನಾನು ಮದುವೆ ಆಗುವುದಿಲ್ಲವೆಂದು ಅವನು ಹೇಳುತ್ತಾನೆ .

'ಯಾಕೆ' ಎಂದು ಕಾವೇರಿ ಕೇಳಿದಾಗ

"ನಾನು ಬಹಳ ಅಗ್ಗವಾಗಿ ಸಿಕ್ಕುತ್ತೇನೆಂದು ನೀವು ತಿಳಿದಿರಬಹುದು ಆದರೆ ನಾನು ಎಂದಿಗೂ ನಿಮ್ಮ ತಂಗಿಯನ್ನು ಮದುವೆಯಾಗುವುದಿಲ್ಲ ನಿಮ್ಮ ತಂದೆಯಿಂದ ನಾನು ಉಪಕಾರ ಪಡೆದಿರುವುದು ನಿಜ. ಆದರೆ ಮದುವೆಯಂತಹ ಗಂಭೀರವಾದ ಗಹನವಾದ ವಿಷಯದಲ್ಲಿ ಜೂಜಾಡುವುದು ನನಗಿಷ್ಟವಿಲ್ಲ".

ಯಾಕೆ ಒಂದು ಕಾಲದಲ್ಲಿ ಹುಚ್ಚಿಯಾಗಿದ್ದೆ ಎಂದೆ? ಆದರೆ ಈಗ ನಾನು ಸರಿಯಾಗಿದ್ದೇನೆ.ನನ್ನ ತಂಗಿ ಸರಿಯಾಗಿದ್ದಾಳೆ. ನಮ್ಮ ವಂಶದಲ್ಲಿ ಯಾರಿಗೂ ಹುಚ್ಚಿರಲಿಲ್ಲ ಎಂದು ಮಾತಾನಾಡುತ್ತ ಕಾವೇರಿಯ ಧ್ವನಿ ಬಿರುಸಾಯಿತು. ಅಪಮಾನ ,ಕೋಪದಿಂದ ಅವಳ ಮುಖ ಕೆಂಪಾಯಿತು. ಭಾವೋದ್ರೇಕದಿಂದ ಅವನ ಮಗಳು ಉದ್ರೇಕಗೊಂಡೊಡನೆ ಕಾವೇರಿಯ ತಂದೆ ನಾರಣಪ್ಪನವರಿಗೆ ಮದುವೆಯ ಪ್ರಶ್ನೆ ಸಂಪೂರ್ಣವಾಗಿ ಮುರಿದುಬಿತ್ತು ಎಂದು ಖಾತ್ರಿಯಾಯಿತು.
ಕಾವೇರಿಯು ಈ ಸಮಯದಲ್ಲಿ ಆಡುವ ಮಾತುಗಳು ಪೂರ್ತಿ ಕಾದಂಬರಿಯ ಉದ್ದೇಶವನ್ನು ತಿಳಿಸಿಕೊಂಡುವಂತೆ ಚಿತ್ರಿತವಾಗಿದೆ.
"ನಾನು ಒಮ್ಮೆ ಹುಚ್ಚಿಯಾಗಿದ್ದೆ ಎನ್ನುವುದನ್ನು ಮರೆಯಬಾರದು? ನಾನು ತಲೆಎತ್ತದಂತೆ ನಾಲ್ಕು ಜನರಂತೆ ಬಾಳುವೆ ಮಾಡಬಾರದು ಎಂದು ನೀವೆಲ್ಲರೂ 'ಹುಚ್ಚಿ' ಎಂಬ ಚಪ್ಪಡಿಕಲ್ಲನ್ನು ತಲೆಯ ಮೇಲೆ ಎತ್ತಿಹಾಕುತ್ತೀರಿ? ನಿಮಗೆ ಯಾವಾಗಲೂ ಒಂದು ಸಲವಾದರೂ ಎಂತಹ ಖಾಯಿಲೆಯೂ ಬಂದಿರಲಿಲ್ಲವೇ? ಅದರ ನೆನಪಿನ ಚೂರಿಯಿಂದ ನಿಮ್ಮನ್ನು ಇರಿಯುತ್ತಾರೆಯೇ ಎಂದು ತನ್ನ ಮನದ ಅಳಲನ್ನು, ಜನರ ತಿರಸ್ಕಾರವನ್ನು ಪ್ರತಿಭಟಿಸಿದಳು.

ಸತೀಶನು ಕಾವೇರಿಯೊಡನೆ ದೈಹಿಕ ಸಂಪರ್ಕವನ್ನು ಕಳೆದುಕೊಂಡು ಅವಳನ್ನು ಮಾನಸಿಕವಾಗಿ ಮತ್ತು ದೈಹಿಕವಾಗಿ ಜರ್ಜರಿತಮಾಡುತ್ತಾನೆ. ತನ್ನ ದೊಡ್ಡ ಮಗನನ್ನು ಒಂದು ಬೋರ್ಡಿಂಗ್ ಸ್ಕೂಲಿಗೆ ಸೇರಿಸುತ್ತಾನೆ. ತನ್ನ ಮನಃ ಸ್ವಾಸ್ಥ್ಯವನ್ನು ಪ್ರತಿಪಾದಿಸಲು ಕಾವೇರಿ ಮಾಡುವ ಎಲ್ಲಾ ಪ್ರಯತ್ನಗಳು ವಿಫಲವಾಗುತ್ತಾ ಹೋಗುತ್ತವೆ.

ಸದಾ ಕಾವೇರಿಯ ಸೌಂದರ್ಯದ ದಾಸನಾಗಿದ್ದ ಸತೀಶನು ಬೇರೊಂದು ಹೆಣ್ಣಿನ ಸಹವಾಸವನ್ನು ಅಪೇಕ್ಷಿಸಿಯೇ ಇರಲಿಲ್ಲ. ಆದರೆ ಆಸ್ಪತ್ರೆಯಿಂದ ಹಿಂತಿರುಗಿ ಬಂದ ಕಾವೇರಿಯ ಮೇಲೆ ಹಿಂದಿನ ಪ್ರೀತಿ ಇಲ್ಲದಾಗಿರುತ್ತದೆ. ಈ ನಡುವೆ ತನ್ನ ಗಮನವೆಲ್ಲಾ ವಿಮಲ ಮೇಲೆ ಕೇಂದ್ರೀಕೃತವಾಗಿರುತ್ತದೆ. ಪ್ರತಿ ದಿನ ಏನಾದರೂ ನೆಪ ಹೇಳಿ ರಾತ್ರಿ ತಡವಾಗಿ ಬರುತ್ತಿದ್ದ ಗಂಡನನ್ನು ಪರೀಕ್ಷಿಸಲು ತಾನೇ ವಿಮಲಳ ಮನೆಯ ಬಳಿ ಬಂದು ಹೊರಗಿನಿಂದ ಸತೀಶನ ಧ್ವನಿಯನ್ನು ಆಲಿಸಿದಳು. ವಿಮಲ ಸತೀಶನ ಧ್ವನಿಯನ್ನು ಸ್ಪಷ್ಟವಾಗಿ ಗುರ್ತಿಸಿದಳು. ಬಾಗಿಲನ್ನು ತಟ್ಟಲು ಮತ್ತೆ ಅವಳ ಕೈ ಮುಂದುವರೆಯಿತು.ಆದರೆ ವಿಮಲೆಯಂತಹ ಅತಿ ಅಗ್ಗದ ಹೆಂಗಸಿನ ಮನೆಗೆ ತಾನು ಹೋಗಬಹುದೆ? ಅಲ್ಲಿಗೆ ತನ್ನ ಯೋಗ್ಯತೆ ಏನಾಯಿತು? ತನ್ನ ಕಾಲಿನ ಧೂಳನ್ನು ಹೊರೆಸುವ ಯೋಗ್ಯತೆ ಅವಳಿಗಿಲ್ಲ.

ಹೆಣ್ಣು ಕಾಮಕ್ಕೆ ವಶಳಾಗಿ ಎಷ್ಟೆಂದು ಕೆಳಮಟ್ಟಕ್ಕೆ ಇಳಿಯಬಲ್ಲಳು ಎಂದು ಕಾವೇರಿಯೇ ಪ್ರತ್ಯಕ್ಷ ಕಂಡಳು. ವಿಮಲಳ ಮನೆಯಿಂದ ಹಿಂತಿರುಗಿದ ಸತೀಶನನ್ನು ಕಾವೇರಿ,

'ಎಲ್ಲಿಗೆ ಹೋಗಿದ್ದಿರಿ?'ಎಂದು ಕೇಳಿದಳು.

'ಹೇಳಿದನೆಲ್ಲಾ ಇವತ್ತು "ಮಲ್ಹೋತ್ರಾ" ಮನೇಲಿ

ಮಲ್ಹೋತ್ರಾ ಮನೆಯಲ್ಲೋ ಅಥವಾ ವಿಮಲ ಮನೆಯಲ್ಲೋ ನಿಜ ಹೇಳಿ

ಸತೀಶನ ಮುಖ ವಿವರ್ಣವಾಯಿತು ಒಂದಲ್ಲ ಒಂದು ದಿನವಾದರೂ ಕಾವೇರಿಗೆ ತನ್ನ ಮತ್ತು ವಿಮಲಳ ಸಂಬಂಧ ತಿಳಿಯಬೇಕಲ್ಲ? ಎಷ್ಟು ದಿನ ತಾನು ಅದನ್ನು ಗೋಪ್ಯಾವಾಗಿಡಲು ಸಾಧ್ಯ? ಎಂದು ಹೆಂಡತಿಯ ಮುಂದೆ ಒಪ್ಪಿ ಕೊಂಡನು.
'ಎಷ್ಟು ದಿನದಿಂದ ಈ ನಾಟಕ?
ಕಾವೇರಿ ಪಕ್ಕನೆ ನಕ್ಕು ಹೇಳಿದಳು.
ಕೊನೆಗೂ ನಿಮ್ಮ ಮೇಲೆ ಬಿದ್ದ ಸೂಳೆಯೇ ಬೇಕಾಯಿತು, ಒಂದಲ್ಲಾ ಒಂದು ದಿನ ನಮ್ಮ ಸಂಬಂಧ ಸರಿ ಹೋಗಬಹುದೆಂದು.

ನಾನು ಭಾವಿಸಿದ್ದೆ ಇನ್ನು ಎಂದೆಂದಿಗೂ ನಾವು ಸರಿಹೋಗುವುದು ಸಾಧ್ಯವಿಲ್ಲ ಇನ್ನು ಭರವಸೆ ಏನೇನೂ ಉಳಿದಿಲ್ಲ. ಇಲ್ಲಿಗೆ ಎಲ್ಲಾ ಮುಗಿಯಿತು. ಕಾವೇರಿಯ ದನಿ ಗಳಿಗೆಗಳಿಗೆಗೂ ಬಿರುಸಾಯಿತು. ಬಿಳುಪೇರಿದ ಅವಳ ಮುಖ ಕೆಂಪೇರಿ ಕಣ್ಣುಗಳು ಕೆರಳಿದವು.
'ಕಾವೇರಿ ಸಮಾಧಾನಗಳಾಗು.....'
ಸಮಾಧಾನ! ನನಗಿಂತಲೂ ನಿಮಗೆ ಮೇಲೆ ಬಂದು ಬಿದ್ದ ಸೂಳೆಯೇ ಹೆಚ್ಚು ಹಿತವಾದಳು_..

ಕಾವೇರಿಯ ತಲೆಯಲ್ಲಿ ಅಗ್ನಿಪರ್ವತ ಸಿಡಿದಂತೆ ಅಸ್ಫೋಟವಾಯಿತು. ಪ್ರಳಯವಾಗುತ್ತಿರುವಂತೆ ಭಾಸವಾಗಿ ಕಾವೇರಿ ಅತ್ತಿಂದಿತ್ತ ಹೊರಲಾಡಿದಳು. ಕಿವಿಯಲ್ಲ, ತಲೆಯಲ್ಲಿ ಅಸಾಧ್ಯ ಸದ್ದಾಗತೊಡಗಿತು.ದಶದಿಕ್ಕುಗಳಿಂದಲೂ ಮೊನಚಾದ ಬಾಣಗಳು ಒಂದಾದಮೇಲೊಂದರಂತೆ ಹಾರಿಬಂದು ಕಾವೇರಿಯ ಸುತ್ತಲೂ ಪಂಜರವನ್ನು ನಿರ್ಮಿಸಿ ಅವಳನ್ನು ಬಂಧಿಯನ್ನಾಗಿ ಮಾಡಿದವು.

'ಕಾವೇರಿ ಹುಚ್ಚಿ, ಹುಚ್ಚಿ, ಕಾವೇರಿ......ಅದೋ ಅವಳು ಹುಚ್ಚಿ, ಪಾಪ !

ಅವಳ ಗಂಡ ಸೂಳೆನ ಇಟ್ಟು ಕೊಂಡಿದ್ದಾನೆ ಪಾಪ!'

ಕಾವೇರಿ ಎರಡು ಕೈಗಳಿಂದಲೂ ಕಿವಿಯನ್ನು ಗಟ್ಟಿಯಾಗಿ ಮುಚ್ಚುಕೊಂಡಳು. ಆದರೂ ಜನರ ನಗುವಿನ ಸದ್ದು ಕಾವೇರಿಯ ತಲೆಯ ನರಗಳನ್ನು ಒಡೆದು ಬಿಡುವಷ್ಟು ರಭಸದಿಂದ ಅವಳೆಡೆಗೆಹರಿದು ಬಂತು.
ಜನಸಮೂಹದಲ್ಲಿ ಎಲ್ಲರಿಗಿತಂಲೂ ಮುಂದೆ ಸತೀಶ ನಿಂತು ಕಾವೇರಿಯ ಮೇಲೆ ದೊಡ್ಡ ದೊಡ್ಡ ಬಂಡೆಗಳನ್ನು ಎಸೆಯುತ್ತಿದ್ದ.
'ಕಾವೇರಿ, ಕಾವೇರಿ_..' ಎಂದು ಸತೀಶ ಕಾವೇರಿಯ ಭುಜವನ್ನು ಹಿಡಿದು ಕುಲುಕಿದಾ.
'ನನಗೆ ಬಾಳೋಕೆ ನೀವು ಒಂದು ಅವಕಾಶನೂ ಕೊಡಲಿಲ್ಲ ಒಂದೇ ಒಂದು ಅವಕಾಶ ಕೊಡಬೇಕಾಗಿತ್ತು ಒಂದೇ ಒಂದು..........'
'ಕಾವೇರಿ..........'ಕಾವೇರಿ ..........'
'ಒಂದೇ ಒಂದು..........'ಒಂದೇ ಒಂದು..........'

‘ಕಾವೇರಿ..........’ ಕಾವೇರಿ..........’

‘ಕಾವೇರಿಯ ಕಣ್ಣುಗಳು ಶೂನ್ಯದತ್ತ ತಿರುಗಿದವು ಅಗಲವಾದ ಕಣ್ಣುಗಳ ತುಂಬಾ ಉನ್ಮಾದ ತುಂಬಿಕೊಂಡಿತ್ತು.
ನಗೆಯಲ್ಲಿ ಉನ್ಮಾದ ____.ದನಿಯಲ್ಲಿ ಉನ್ಮಾದ..........’ ಮಾತಿನಲ್ಲಿ ಉನ್ಮಾದ, ಅಳಿವಿನಲ್ಲಿ ಉನ್ಮಾದ.
‘ಕಾವೇರಿ..........’ ಕಾವೇರಿ..........’
ಕಳೆದು ಹೋಗಿದೆ, ಬನ್ನಿ ಹುಡುಕಿಕೊಂಡು ಬರೋಣ.......... ಬನ್ನಿ.......... ನದೀತೀರ..........ಬೆಳದಿಂಗಳು..........
ಹೋಗೋಣ ಬನ್ನಿ ಅಲ್ಲಿಗೆ ಬನ್ನಿ..........ಬನ್ನಿ..........
‘ಕಾವೇರಿ..........’
ಕಾವೇರಿ ತದ್ದು ಕುಳಿತು ಕೆಂಗಣ್ಣಿನಿಂದ ಗಂಡನನ್ನು ನೋಡಿ. ನೀವು ಬಾರದಿದ್ದರೆ ನಾನುಬ್ಬಳೇ ಹೋಗ್ತೀನಿ– ಎನ್ನುತ್ತಾ ಹೊರಗೊಡಿದಳು ಓಡುತ್ತಿದ್ದ ಕಾವೇರಿಯನ್ನು ಹಿಡಿದು ರೂಮಿನಲ್ಲಿ ಕೂಡಿ ಹಾಕಿದನು.
ಕಾವೇರಿ ಮುಚ್ಚಿದ ಬಾಗಿಲಿನ ಮೇಲೆ ಗುದ್ದುತ್ತಾ ಚೀರುತ್ತಿದ್ದಳು.

‘ನಾನು ಹೋಗ್ತೀನಿ_..ಮೇಲೆ ಬಂದು ಬಿದ್ದ ಸೂಳೆ_..ಮಡಕೇರಿ ಹೋಗ್ತೀನಿ.

ಅಳುವಿನಿಂದ ಮೊದಲಾದ ಅಲಾಪನೆ ನಗುವಿನಲ್ಲಿ ಮುಕ್ತಾಯವಾಗುತ್ತಿತ್ತು ನಗು ಅಳುವಿನಲ್ಲಿ ಕೊನೆಗೊಳ್ಳುತ್ತಿತ್ತು.
‘ಒಂದೇ ಒಂದು ಅವಕಾಶ– ಮಡಕೇರಿ
ಆಸ್ಪತ್ರೆಗೆ ಕರೆದೊಯ್ಯಲು ಸತೀಶ ಕಾರನ್ನು ತಂದ ಕಾವೇರಿಯನ್ನು ಹತ್ತಲು ಹೇಳಿದ ಇಲ್ಲ ನಾನು ಬರುವುದಿಲ್ಲ ಎಂದು ಹಠ ಹಿಡಿದಳು.
‘ನದೀ ತೀರಕ್ಕೆ ನಡೆಯಿರಿ ಎಂದು ಕಾವೇರಿ ಕಾರಿನವರಿಗೆ ಹೋಗಿ ಮತ್ತೆ ಮೊಂಡಾಟ ಮಾಡುತ್ತಾ ಮೆಟ್ಟಲಿನ ಮೇಲೆ ಕುಳಿತು ಬಿಟ್ಟಳು.

ಬಲವಂತದಿಂದ ಸತೀಶ ಕಾವೇರಿಯನ್ನು ಕಾರಿನ ಒಳಗೆ ಎಳೆದೊಯ್ಯಲು ಅವಳ ಅಬ್ಬರ, ಗುಡುಗಾಟ ನೋಡಿ ಸತೀಶ ನೂಲಿನ ಹಗ್ಗವೊಂದನ್ನು ತಂದು ಕಾವೇರಿಯ ಕೈಕಾಲುಗಳನ್ನು ಕಟ್ಟಿ ಕಾರಿನಲ್ಲಿ ಕೂರಿಸಿದ.
ಒಂದು ಜೀವಿಯ ಮಾನಸಿಕ ಸಾವನ್ನು ಅಕ್ಕಪಕ್ಕದ ಮನೆಯವರು ಬೀದಿಯಲ್ಲಿ ಹೋಗುತ್ತಿದ್ದವರು ನಿಂತು ನೋಡಿದರು.
ಕುಚೋದ್ಯ,ಕನಿಕರ ಬೆರೆತ ದನಿಯಲ್ಲಿ ಎಲ್ಲರೂ ಕಾವೇರಿಗೆ ‘ಅಯ್ಯೋ ಪಾಪ’ ಎಂದರು.
ಕಾರು ಹೊರಟಿತು.
ಕಾವೇರಿ ತನಗೆ ತಾನೆ ಗೊಣಗುಟ್ಟಿಕೊಂಡು ಸೀಟಿಗೊರಗಿದಳು.
........‘ Veni vedi viei’ ..........’ ನಾನು ಬಂದೆ..........’ ನಾನು ನೋಡಿದೆ..........’ ನಾನು ಗೆದ್ದೆ..........’

ಆದರೆ ಗೆದ್ದವಳು ಮಾತ್ರ ಕಾವೇರಿಯಾಗಲಿಲ್ಲ.

ಈ ಕಾದಂಬರಿಯಲ್ಲಿ ಲೇಖಕಿ ಮಾನಸಿಕ ರೋಗವನ್ನು ಇವರ ದೈಹಿಕ ರೋಗಗಳಂತೆಯೇ ನೋಡಲು ಪ್ರೀತಿ ವಿಶ್ವಾಸಗಳಿಂದ ಕಂಡು ಗುಣ ಹೊಂದಿದ ಮಾನಸಿಕ ರೋಗಿಯು ಮತ್ತೆ ಸಮಾಜದಲ್ಲಿ ಬದುಕುವಂತೆ ಅನುವು ಮಾಡಿಕೊಡಲು ಸಮಾಜವನ್ನು ತೀವ್ರ ಕಾಳಜಿಯಿಂದ ಕೋರುತ್ತಾರೆ.

ಕಾವೇರಿಯು ಅನೇಕ ಸಲ ಗದ್ಗರಿಸುವಂತೆ ಸಮಾಜವು ಟಿ.ಬಿ.ಕ್ಯಾನ್ಸರ್ ಮುಂತಾದ ಭಯಂಕರ ರೋಗಗಳಿಂದ ಪೀಡಿತರಾದವರನ್ನು ತಿರಸ್ಕಾರದಿಂದ ನೋಡುವುದಿಲ್ಲ, ಅವರಿಗೆ ಸಹಾನು ಭೂತಿಯಿಂದ ಸಹಾಯಮಾಡುತ್ತದೆ. ಆದರೆ ಮುಖ್ಯವಾಗಿ ಅಜ್ಞಾನ ಹಾಗೂ ಪೂರ್ವಗ್ರಹಗಳ ಕಾರಣದಿಂದಾಗಿ ಮಾನಸಿಕ ರೋಗಿಗಳ ಬಗ್ಗೆ ಸಮಾಜಕ್ಕೆ ತಿರಸ್ಕಾರ ಹಾಗೂ ಹೆದರಿಕೆ ಇವುಗಳ ಹೊರತು ಬೇರೇನೂ ಇಲ್ಲ.

ಬುದ್ಧಿ ಭ್ರಮಣೆಯನ್ನು ಗುಣಪಡಿಸಲಾದ ರೋಗವೆಂದು ಪರಿಗಣಿಸಿ ಅದರಿಂದ ನರಳುವ ವ್ಯಕ್ತಿ ಮತ್ತೆ ಸರ್ವಸಾಮಾನ್ಯವಾಗಿ ಬದುಕು ನಡೆಸಲು ಸಾಧ್ಯವೇ ಆಗದಂತೆ ಸಮಾಜವು ವರ್ತಿಸುತ್ತದೆ. ಕಾವೇರಿ ಮತ್ತೆ ಬುದ್ಧಿ ವಿಕಲ್ಪಳಾಗಿ ಆಸ್ಪತ್ರೆಗೆ ಸೇರಿಸಲ್ಪಡಬೇಕಾಗಿ ಬಂದಾಗ ಅವಳ ಅತ್ತೆ ವಿಷದಿಂದ ಉದ್ಗರಿಸುತ್ತಾರೆ. ಬಹುಶಃ ಸತೀಶ ತಾವು ಮಕ್ಕಳು, ನೆರೆಹೊರೆ, ಆಳುಗಳು, ಸಮಾಜ ಎಲ್ಲ ಕೊಂಚ ಮನಸ್ಸು ಮಾಡಿದ್ದರೆ ಸಹೃದಯಗಳಾಗಿದ್ದರೆ, ಕಾವೇರಿ ಮೊದಲಿನಂತೆ ಬಾಳಲು ಸಾಧ್ಯವಾಗುತ್ತಿತ್ತೇನೋ ಎಂದು.

ಆಸ್ಪತ್ರೆಯಿಂದ ಮನೆಗೆ ಬಂದ ಆರು ತಿಂಗಳಲ್ಲೇ ತಾವೆಲ್ಲರೂ ಸೇರಿ ಕಾವೇರಿಯನ್ನು ಮತ್ತೆ ಅಲ್ಲಿಗೆ ತಳ್ಳುತ್ತಿಲ್ಲವಷ್ಟೇ?(ಪು.೨೩೯) ಕಾವೇರಿಯ ಪಾತ್ರದಲ್ಲಿ ಲೇಖಕಿ ಕಾವೇರಿಯಂತಹ ನತದೃಷ್ಟ ವ್ಯಕ್ತಿಗಳ ಪರವಾಗಿ ಸಮಾಜವನ್ನು ಕೇಳುತ್ತಾರೆ. ನನಗೆ ಬಾಳೋಕೆ ನೀವು ಒಂದು ಅವಕಾಶನೂ ಕೊಡಬೇಕಿತ್ತು ಒಂದೇ ಒಂದು ಅವಕಾಶ ಕೊಡಬೇಕಾಗಿತ್ತು. ಒಂದೇ ___ಒಂದೇ ಶರಪಂಜರ ಎಂದು ಮನಕರಗಿಸುವ ದುರಂತ ಕಾದಂಬರಿಯಾಗಿ ಹೊರಹೊಮ್ಮಿದೆ.

'ಶರಪಂಜರ' ಕಾದಂಬರಿಯನ್ನಾಧರಿಸಿ ಕಲ್ಪನಾಳ ಚಿತ್ರಿಕೆಯಿಂದ ನಾಗವಲ್ಲಿ ಎಂಬ ಚಿತ್ರವೂ ಇತ್ತೀಚೆಗೆ ಮೂಡಿಬಂದಿದೆ

## ಅಧ್ಯಾಯ - ೬

## ಜನಪ್ರಿಯ ಮನೋವೈಜ್ಞಾನಿಕ ಕಾದಂಬರಿಗಳ ತೌಲನಿಕ ಅಧ್ಯಯನ

ಮನಶ್ಯಾಸ್ತ್ರವನ್ನು ವಸ್ತುವಾಗಿ ಬಳಸಿಕೊಂಡು ತ್ರಿವೇಣಿಗಿಂತ ಮೊದಲು ಅನೇಕರು ಸಾಹಿತ್ಯ ಸೃಷ್ಟಿಯನ್ನು ಮಾಡಿದ್ದಾರೆ ತ್ರಿವೇಣಿಯನಂತರ ಇದೇ ಹಾದಿಯಲ್ಲಿ ಅನೇಕ ಕಥೆ ಕಾದಂಬರಿಗಳು ಬಂದಿವೆ. ಸ್ತ್ರೀಯು ಮನಶ್ಯಾಸ್ತ್ರವನ್ನು ಬಳಸಿಕೊಳ್ಳುವ ರೀತಿಗೂ ಪುರುಷ ಮನಶ್ಯಾಸ್ತ್ರವನ್ನು ಬಳಸಿಕೊಳ್ಳುವ ರೀತಿಗೂ ವ್ಯತ್ಯಾಸವನ್ನು ಕಾಣಬಹುದು.

ಬರಗೂರು ರಾಮಚಂದ್ರಪ್ಪನವರ ಸೂರ್ಯ ಕಾದಂಬರಿಯಲ್ಲಿ ಬರುವ ಮುಖ್ಯಪಾತ್ರ ಸೀತಕ್ಕ ಜಮೀನ್ದಾರ ಪಾತ್ರಗಳನ್ನು ಮುಖ್ಯವಾಗಿ ವಿಶ್ಲೇಷಿಸಿದ್ದಾರೆ.

ಸೀತಕ್ಕ ಮತ್ತು ಹೆಸರಿಲ್ಲದ ಜಮೀನ್ದಾರ ಪಾತ್ರಗಳು ಕರಿಯ, ರಾಮಣ್ಣ ಮುಖ್ಯ ಪಾತ್ರಗಳ ಪೋಷಣೆಗೆ ಹುಟ್ಟಿಹಾಕಿದಂತವಳು. ಬರಗೂರವರ ಬರವಣಿಗೆಯಲ್ಲಿ ಸಾಮಾಜಿಕ ವಿಮರ್ಶಾತ್ಮಕ ಪ್ರಜ್ಞೆ (Social critical awerness) ಬಹಳ ಮುಖ್ಯವಾಗಿ ತಮ್ಮನ್ನು ಯಾವುದೋ ಪಾತ್ರದ ಮೂಲಕ ಅಭಿವ್ಯಕ್ತಿಸಲು ಯತ್ನಿಸುವಾಗ ಈ ಸಾಮಾಜಿಕ ವಿಮರ್ಶತ್ಮಾಕ ಪ್ರಜ್ಞೆ ಕಲ್ಪನೆಗಿಂತ ಮೇಲುಗೈ ಪಡೆಯುತ್ತದೆ.

'ಈ ಕಾರಣಕ್ಕಾಗಿ ಅವರು ತಮ್ಮ ವ್ಯಕ್ತಿತ್ವದ ಅಭಿವ್ಯಕ್ತಿಯಾಗಿಯೇ ಸೃಷ್ಟಿಸುವ ಪಾತ್ರಗಳಲ್ಲಿ ಈ ಸಾಮಾಜಿಕ ವಿಮಾರ್ಶಾತ್ಮಕ ಪ್ರಜ್ಞೆಯಿಂದ ಸಾಧ್ಯಾವಾಗುವ ವ್ಯಕ್ತಿತ್ವದ ಅಪೂರ್ವ ಬದಲಾವಣೆ ಕ್ಷಣಾರ್ಧದಲ್ಲಿ ಆಗುವುದನ್ನು ಕಾಣುತ್ತೆವೆ. 'ಸೂರ್ಯ' ಕಾದಂಬರಿಯಲ್ಲಿ ಸೀತಕ್ಕ ಇಂತಹ ಒಂದು ಪಾತ್ರ– ಸೀತಕ್ಕನೇ ಬರಗೂರು ರಾಮಚಂದ್ರಪ್ಪ; ಸೀತಕ್ಕನನ್ನು ಅವರು ಸೃಷ್ಟಿಸಿರುವುದು ತಮ್ಮ ಅಭಿವ್ಯಕ್ತಿ ವಿಧಾನಕ್ಕಾಗಿ ಎಂದೆನಿಸುತ್ತದೆ.'[೧]

ಸೀತಕ್ಕನ ಪಾತ್ರದಲ್ಲಿ ತನ್ನ ಸ್ತ್ರೀತ್ವದ ಅಭಿವ್ಯಕ್ತಿಗೆ ಅಡ್ಡಿಯಾಗಿರುವ ಗೊಡ್ಡು ಸಾಂಪ್ರಾದಾಯಿಕ ಮೌಲ್ಯಗಳನ್ನೆಲ್ಲಾ ಒಮ್ಮೆಂದಲೆ ಕಿತ್ತೊಗೆದು ತನ್ನ ಸ್ತ್ರೀತ್ವದ ಅಭಿವ್ಯಕ್ತಿಯನ್ನು ಪಡೆಯುತ್ತಾ ದಾಪುಗಾಲಿನಿಂದ ಹೊಸ ಸಂಸ್ಕೃತಿಯನ್ನು ಸೃಷ್ಟಿಸುವತ್ತ ನಡೆಯುವ ವ್ಯಕ್ತಿತ್ವ ಪ್ರತಿನಿಧಿಸಲ್ಪಟ್ಟಿದೆ.

ಸೀತಕ್ಕ ಮೊದಲಿನಿಂದಲೂ ಹಳೆಯ ವ್ಯವಸ್ಥೆಯಲ್ಲಿಯೇ ಹಳೆಯ ವ್ಯವಸ್ಥೆಯ ಹಿಡಿತವನ್ನು ಕಿತ್ತೊಗೆದು 'ಪೂರ್ಣವಾಗಿಯೇ' ಬೇರೊಂದು ಸಮಾಜಕ್ಕೆ ಸರಿಹೊಂದುವ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದಾಳೆನ್ನುವ ನಿಲುವಿಗೆ ಬರಬೇಕಾಗುತ್ತದೆ. ಸೀತಕ್ಕನ ವ್ಯಕ್ತಿತ್ವದ ಅಭಿವ್ಯಕ್ತಿಯಲ್ಲಿ ಕಾಣಿಸಿಕೊಳ್ಳದ ಈ Sudden finishedness ಬಹುಶಃ ಅವಳ ಪಾತ್ರಕ್ಕೆ ಬರಗೂರರು ನೀಡಿರುವ ಹೆಚ್ಚಿನ ಸಾಮಾಜಿಕ ವಿಮಾರ್ಶತ್ಮಕ ಪ್ರಜ್ಞೆ ಎಂದೆನಿಸುತ್ತದೆ.

ಈ ಕಾದಂಬರಿಯಲ್ಲಿ ಬರುವ ಸೀತಕ್ಕನ ಪಾತ್ರವನ್ನು ಓದುಗರು ಅದರಲ್ಲೂ ಮುಖ್ಯವಾಗಿ ಸ್ತ್ರೀಯರು ಅನುಭವಿಸಿದ ಹಾಗೆ ಯಾವುದೊ ಅತ್ಯಂತ ಶಕ್ತಿಯುತವಾದ archetypal ಅನುಭವ ಸೃಷ್ಟಿಸುವ ಹಾಗೆ ಕಾಣುತ್ತೆ. ಕಾರಣ ಸೀತಕ್ಕನ ಸಂಧರ್ಭದಲ್ಲಿ ಪ್ರತಿ ಸ್ತ್ರೀಯು ತನ್ನ ಸ್ತ್ರೀತ್ವದ ಅಭಿವ್ಯಕ್ತಿ ಮಾಡಬೇಕೆಂದಿದ್ದ ಕಾರ್ಯವನ್ನು ಉತ್ಕಟವಾಗಿ ಬಯಸಿ ಆದರೆ ಸಾಮಾನ್ಯವಾಗಿ ಮಾಡದೆ ಇರುವ ಕಾರ್ಯವನ್ನು ಸೀತಕ್ಕ ಪೂರ್ತಿಯಾಗಿಯೇ ಮಾಡಿಬಿಡಬಹುದು.

ಬಹುಶಃ ಸ್ತ್ರೀ ಓದುಗರು ಈ ಪಾತ್ರದ ವ್ಯಕ್ತಿತ್ವವನ್ನು ಅನುಭವಿಸುವಲ್ಲಿ ತಮ್ಮ ವ್ಯಕ್ತಿತ್ವ ಯಾವುದೊ ಬಾರಿ ಅಗಾದವಾದ ಶಕ್ತಿಗೆ ಸಿಕ್ಕಿ ತನ್ನದೇ ಆದ ಅನುಭವ ಪಡೆಯುತ್ತವೆಯೆನೋ ಎನ್ನುವ ಸೆಳೆತಕ್ಕೆ ಸಿಕ್ಕಿರಬಹುದು; ಅಂತಹ ಅನುಭವ ಪ್ರಜ್ಞಾಪೂರ್ವಕವಾಗಿ ನಿಯಂತ್ರಿತ, ಬಹುಶಃ ಈ ಗುಣ ಆ ಪಾತ್ರದ ಪೂರ್ಣತೆಯಿಂದ ಬಂದಿರಬಹುದು. ಕಾದಂಬರಿಯಲ್ಲಿಯೂ ಸಹ ಸೀತಕ್ಕ ಮಾತನಾಡಲು ಶುರು ಮಾಡಿದರೆ ಜಮೀನ್ದಾರ ಮತ್ತಿತರೆಲ್ಲರೂ ಮೂಕ ಪ್ರೇಕ್ಷಕರಾಗುತ್ತಾರೆ "ಬೀಸಿ ಬರ್ತಿರೋ ಬೆಳಕಿಗೆ ಬೆರಗಾದವರಂತೆ ಜನರೆಲ್ಲಾ ಅವಕ್ಕಾದರು" (ಪು.೬೫)

ಇಡೀ ವ್ಯವಸ್ಥೆಯನ್ನು ಬದಿಗೊತ್ತುವ ಸೀತಕ್ಕನ 'ಸ್ವಾತಂತ್ರ್ಯ' ಬರಗೂರರ ಸ್ವಾತಂತ್ರ್ಯವೇನೋ ಎನಿಸುತ್ತದೆ.

ತ್ರಿವೇಣಿಯವರು ಸ್ತ್ರೀ ದೃಷ್ಟಿಕೋನದಲ್ಲಿ ರಚಿತವಾಗಿರು 'ಶರಂಜರ' ಕಾದಂಬರಿಯು ಸಮಾಜದ ಅನೀತಿಗೆ ಒಳಗಾಗಿ ತನ್ನ ಪ್ರಸವ ಸನ್ನಿವೇಶದಲ್ಲಿ ಉಂಟಾದ ಅಶಕ್ತಕತೆಯಿಂದ ಅಂತರ್ಯದಲ್ಲಿದ್ದ ಅಪರಾಧದ ಅಂಜಿಕೆಯೊಂದು ಜಾಗೃತಗೊಂಡಾಗ, ಚಿತ್ತ ಸ್ವಾಸ್ಥ ಕಳೆದುಕೊಂಡು ಜೀವನದಲ್ಲಿ ನೆಮ್ಮದಿಯಿಂದ ವಂಚಿತಳಾಗುತ್ತಾಳೆ.

ಆಸ್ಪತ್ರೆಯಿಂದ ಗುಣಮುಖಳಾದ ಕಾವೇರಿಯನ್ನು ಸಮಾಜ ಮತ್ತು ಕುಟುಂಬದವರೂ ನಡೆಸಿಕೊಳ್ಳುವ ರೀತಿಯು ಕಾವೇರಿಯಲ್ಲಿ ಅವಮಾನ ಅಸಮಾಧಾನದಿಂದಾಗಿ ತನ್ನ ನಿಜವಾದ ಸ್ಥಾನ ಮಾನಸಿಕ ಆಸ್ಪತ್ರೆಯೇ ಅಲ್ಲೇ ನೆಮ್ಮದಿ ಇರುವದು ಎಂದು ಮರಳಿ ಆಸ್ಪತ್ರೆಯನ್ನೆ ಸೇರುತ್ತಾಳೆ.

ಸಮಾಜದ ಕ್ರೂರ ವರ್ತನೆಯಿಂದ ಸ್ತ್ರೀಯೊಬ್ಬಳು ಮತ್ತೆ ಮಾನಸಿಕ ಸ್ವಾಸ್ಥ್ಯ ಕಳೆದುಕೊಂಡು ಆಸ್ಪತ್ರೆ ಸೇರುವ ಹೃದಯವಿದ್ರಾವಕ ಚಿತ್ರಣ ಸಮಾಜಕ್ಕೆ ಬದಲಾಗುವಂತೆ ರೋಗಿಗಳನ್ನು ಪ್ರೀತಿಯಿಂದ ಕಂಡು ಅವರನ್ನು ಮನುಷ್ಯರಂತೆ ಬದುಕಲು ಬಿಡಿ ಎಂಬ ಸಂದೇಶವನ್ನು ನೀಡಿದೆ.

ಬರಗೂರರ 'ಸೂರ್ಯ' ಕಾದಂಬರಿಯನ್ನು ನೋಡಿದಾಗ ಪುರುಷರು ಸ್ತ್ರೀ ಮೂಲಕ ಸಮಾಜದ ಬದಲಾವಣೆಯನ್ನು ಮಾಡುವಲ್ಲಿ ಯಶಸ್ವಿಯಾಗಿದ್ದಾರೆ. ತ್ರಿವೇಣಿ ಸ್ವಲ್ಪ ಮಟ್ಟಿಗೆ ಸೋತಿದ್ದಾರೆ ಎಂದೇ ಹೇಳಬಹುದು.

**ವೈದೇಹಿಯವರ 'ಆತ' (೧೯೭೯)**

ವೈದೇಹಿಯವರ 'ಆತ' ಕತೆಯು ಮಾನಸ ಘಟನಾ (Phenomenological) ಚೌಕಟ್ಟಿನಲ್ಲಿ ಮುಕ್ತ ಸಹಚರ್ಯ (free association) ತಂತ್ರವನ್ನು ಬಳಸಿಕೊಂಡು ರಚಿತವಾಗಿದೆ. ಈ ಕತೆಯು ಮೂಲವಾಗಿ ಅವಸೀಮೆಯಲ್ಲಿ (subliminnalli) ಅಂತರ್ಗತವಾಗಿ ಸ್ವಚ್ಛಂದವಾಗಿ. ನಿರರ್ಗಳವಾಗಿ ಯಾವ ನಿರ್ಬಂಧವೂ ಇಲ್ಲದೆ, ಹರಿಯುವ ಚಲನಶೀಲತೆಯುಳ್ಳ ಪ್ರೇಮ ಕಾಮಗಳ ಕ್ರಿಯೆಗೂ ಮತ್ತು ಸಮಾಜವು ಮದುವೆಯ ಹಾಗೂ 'ಪಾತಿವ್ರತ್ಯ'ದ ಹೆಸರಿನಲ್ಲಿ ಈ ಕ್ರಿಯೆಯನ್ನು ನಿರ್ಬಂಧಿಸಲು ಮಾಡುವ ಪ್ರಯತ್ನಕ್ಕೆ ಇರುವ ವಿರೋಧವಾಗಿದೆ.

'ಕಾಮ ಪ್ರೇಮಗಳ ಅಸೀಮಾ ಪ್ರಕ್ರಿಯೆಗಳಾಗಿ ಯಾವುದೇ ನಿರ್ಬಂಧವಿಲ್ಲದೆ ಚಲನಶೀಲವಾಗಿರುತ್ತವೆ. ಮದುವೆಯ ಸಂಬಂಧ "ಪವಿತ್ರ"ವೆನ್ನುವ ಹಿನ್ನೆಲೆಯಲ್ಲಿ ಈ ಸ್ವಚ್ಛಂದ ಪ್ರಕ್ರಿಯೆಯನ್ನು ಅದುಮಿಕ್ಕುವ ಪ್ರಯತ್ನ ಸನಾತನ ಕಾಲದಿಂದಲೇ ಇದೆ.

ಸ್ವಭಾವಿಕವಾಗಿ ಅನಿರ್ಬಂಧಿತವಾದ ಪ್ರಾಕೃತಿಕ ಕ್ರಿಯೆಗಳನ್ನು ನಿರ್ಬಂಧಿಸುವ ದೃಷ್ಟಿಯಿಂದಲೇ ಕೆಲವು ಸಂಬಂಧಗಳಿಗೆ ಸಮಾಜ "ಪಾವಿತ್ರತೆ"ಯೆನ್ನಿಸುತ್ತದೆ, ಈ ನಿರ್ಬಂಧದ ಸಾಫಲ್ಯತೆ ವ್ಯಕ್ತಿಯ ಪ್ರಜ್ಞೆಯ ಮೇಲ್ಮೈಸ್ತರಕ್ಕೆ ಸೀಮಿತವಾದ್ದು ಸುಪ್ತಾವಸ್ಥೆಯಲ್ಲಿ ಅರೆಸುಪ್ತಾವಸ್ಥೆಯಲ್ಲಿ ಅಸೀಮಾ ಪ್ರಕ್ರಿಯಗಳಾಗಿ. ಕಾಮ ಪ್ರೇಮದ ತುಯ್ತ ಅನಿರ್ಭಂದಿತವಾಗಿ ತನ್ನ ಪ್ರವಾಹವನ್ನು ಮುಂದುವರಿಸಿರುತ್ತದೆ.'[೨]

ಸುಮಳಿಗೆ ಮನೀಷಯೊಡನೆ ಮದುವೆಯಾಗಿ ಕೆಲವೇ ದಿನಗಳಾಗಿವೆ ಆದರೆ ಅವಳ ಪ್ರೇಮ ಕಾಮಗಳ ಹರಿವು ಹಲವಾರು ಜನರನ್ನು ಆವರಿಸಿಕೊಂಡಿರುವದು ಮತ್ತು ಅವಳ ಗತ ಜೀವನದಲ್ಲಿ ಅದು ಎಲ್ಲೆಲ್ಲಿ ಯಾರ್‍ಯಾರೊಡನೆ ಸ್ಥಿರೀಕೃತವಾಗಿತ್ತೊ ಅದರಿಂದ ಬಿಡಿಸಿಕೊಳ್ಳುವ ಯಾವ ಸೂಚನೆಯೂ ಇಲ್ಲದೆ. ನಿರರ್ಗಳವಾಗಿ ಹರಿಯುವುದು ಕಂಡುಬರುತ್ತದೆ.

ಒಬ್ಬ ವ್ಯಕ್ತಿಯ ಕಾಮ-ಪ್ರೇಮಗಳ ಹರಿವು ಯಾವುದೇ 'ಪಾವಿತ್ರ್ಯತೆಯ' ನಿರ್ಬಂಧಕ್ಕೆ ಮಣಿಯದೆ ತನ್ನದೇ ಗತಿಯಲ್ಲಿ ಸಾಗುತ್ತಿದ್ದರೂ ಸಮಾಜದ ಕಟ್ಟಳೆ ಆಗಾಗ ಶ್ರೇಷ್ಟ ಆಹಂ(super ego)ನ ರೂಪದಲ್ಲಿ ಈ ಚಲನ ಶೀಲತೆಯ ದಿಕ್ಕನ್ನು ಬದಲಾಯಿಸಲು ಅಥವಾ ಕುಂಠಿತಗೊಳಿಸಲು ಯತ್ನಿಸುತ್ತದೆ.

ತ್ರಿವೇಣಿಯವರ ಕಾದಂಬರಿಯಲ್ಲಿ ಪಾವಿತ್ರ್ಯತೆಗೆ ಹೆಚ್ಚು ಮಹತ್ವವಿದೆ. ಇವರ 'ದೂರದಬೆಟ್ಟ' ಕಾದಂಬರಿಯಲ್ಲಿ ಸುನಂದಳು ತನ್ನ ೧೯ನೇ ವಯಸ್ಸಿನಲ್ಲಿ ವಿಧವೆಯಾಗಿರುತ್ತಾಳೆ, ಪುನರ್ವಿವಾಹಕ್ಕೆ ಪೋಷಕರಿಂದಲೇ ಒತ್ತಾಯ ಬಂದಾಗ ಒಪ್ಪಿಕೊಂಡಿದ್ದರೂ ಯಾವುದೋ ಒಂದು ಸುಪ್ತ ಮನಸ್ಸು 'ಪಾವಿತ್ರ್ಯತೆ' ವ್ರತ, ಮಡಿವಂತಿಕೆ ಸೀತೆ, ಸಾವಿತ್ರಿ ಅಹಲ್ಯೆರಂತಹ ಪತಿವ್ರತೆಯರನ್ನು ನೆನೆದು ನರಳುತ್ತಿರುತ್ತಾದೆ.

ಇವರ ಮತ್ತೊಂದು ಕಾದಂಬರಿ 'ಮುಚ್ಚಿದ ಬಾಗಿಲು'ನಲ್ಲಿ ತಾರಾಯೆಂಬ ಪಾತ್ರವು ಯವುದೋ ಒಂದು ಸಂಧರ್ಭದಲ್ಲಿ ಬಲವಂತಾವಾಗಿ ಚುಂಬನಕ್ಕೆ ಒಳಗಾಗಿದ್ದರಿಂದ ತಾನು ಅಪವಿತ್ರಳು ಎಂಬ ಭಾವನೆ ಅವಳನ್ನು ಕಾಡಿತ್ತಿರುತ್ತದೆ. ಪವಿತ್ರವಾದ ಗಂಗೆಯನ್ನು ನಾನು ಮುಟ್ಟಲು ಯೋಗ್ಯಳಲ್ಲವೆಂದು ನೀರು ಮುಟ್ಟಲು ಹಿಂಜರಿಯುತ್ತಿರುತ್ತಾಳೆ.

ಆದರೆ ಇದೇ ಕಾದಂಬರಿಯಲ್ಲಿ ಇಂದಿರಾ ಎಂಬ ಪಾತ್ರವು ಇಲ್ಲಿ ವೈದೇಹಿಯವರ ಕಥೆಯ 'ಸುಮ'ಳ ಪಾತ್ರವನ್ನೇ ಹೋಲುತ್ತದೆ ಇದರಿಂದ ತನ್ನ ವೈವಾಹಿಕ ಜೀವನದಿಂದ ತಳ್ಳಲ್ಪಡುತ್ತಾಳೆ

ಸ್ತ್ರೀಯು ಮನೋವೈಜ್ಞಾನಿಕ ವಸ್ತುವುಳ್ಳ ಕಥೆಯನ್ನು ತನ್ನ ಅನುಭವದ ಮೂಸೆಯಲ್ಲಿಟ್ಟು ವಿವರಿಸುವ ರೀತಿಗೂ ಪುರುಷರ ಮನೋವೈಜ್ಞಾನಿಕ ವಸ್ತುವುಳ್ಳ ಕಥೆಯನ್ನು ವಿವರಿಸುವ ರೀತಿಗೂ ತುಂಬ ವ್ಯತ್ಯಾಸದೊಂದಿಗೆ ಓದುಗರಿಗೆ ವಿಶೇಷ ಅನುಭವಗಳನ್ನು ನೀಡುತ್ತವೆ.

**ಅಡಿ ಟಿಪ್ಪಣಿ**

೧ 'ಅಂತರ್ ಶಿಸ್ತೀಯ ಸಂವೇದನೆ', ಸಂ. ಬರಗೂರು ರಾಮಚಂದ್ರಪ್ಪ;
ಕರ್ನಾಟಕ ಸಾಹಿತ್ಯ ಅಕಾಡೆಮಿ-೧೯೯೨

೨. 'ಅಂತರ್ ಶಿಸ್ತೀಯ ಸಂವೇದನೆ', ಸಂ. ಬರಗೂರು ರಾಮಚಂದ್ರಪ್ಪ;
ಕರ್ನಾಟಕ ಸಾಹಿತ್ಯ ಅಕಾಡೆಮಿ-೧೯೯೨

## ಅಧ್ಯಾಯ - ೭

## ತ್ರಿವೇಣಿಯ ಕಾದಂಬರಿಗಳ ಭಾಷಾಶೈಲಿ ಮತ್ತು ನಿರೂಪಣೆ

ಒಬ್ಬ ಸಾಹಿತಿ ಹೆಚ್ಚು ಓದುಗರನ್ನು ಸಂಪಾದಿಸಿ ಸಾಹಿತ್ಯ ಕ್ಷೇತ್ರದಲ್ಲಿ ಜನಪ್ರಿಯ ಸಾಹಿತಿಯೆನಿಸಿಕೊಳ್ಳ ಬೇಕಾದರೆ ಆತನ ಕೃತಿಗಳಲ್ಲಿರುವ ಭಾಷೆ, ಶೈಲಿ ಕಥಾವಸ್ತು, ನಿರೂಪಣಾ ವಿಧಾನ ಇವೆಲ್ಲಾವೂ ಮುಖ್ಯ ಪಾತ್ರವಹಿಸುತ್ತವೆ.

ಸಾಹಿತ್ಯ ಕ್ಷೆತ್ರದಲ್ಲಿ ಮಹಿಳೆಯರು ಅತ್ಯಲ್ಪವಾಗಿದ್ದ ಕಾಲದಲ್ಲಿ ತಮ್ಮ ಬರವಣಿಗೆಯನ್ನು ಪ್ರಾರಂಭಿಸಿ ಅಂದಿನ ಘಟಾನುಘಟಿಗಳೊಡನೆತಮ್ಮ ಕೃತಿಗಳು ಸ್ಪರ್ಧಿಸಿ ಓದುಗರನ್ನು ಸಂಪಾದಿಸುವುದು ಕಷ್ಟಸಾಧ್ಯವಾದದ್ದು. ಅದಕ್ಕೆ ಸಾಹಿತ್ಯದಲ್ಲಿಯೂ ಗುಣಮಟ್ಟವೇ ಕಾರಣವಾಗಿರಬಹುದೆಂದರೆ ತಪ್ಪಾಗಲಾರದು.

ಐವತ್ತರ ದಶಕದಲ್ಲಿ ತ್ರಿವೇಣಿಯವರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದಾಗ ಅವರ ಮುಂದಿದ್ದ ಪ್ರಭಾವಶಾಲಿ ಲೇಖಕರು ಅ.ನ.ಕೃಷ್ಣರಾವ್, ತ.ರಾ ಸುಬ್ಬರಾಯ್, ಕೃಷ್ಣಮೂರ್ತಿ ಪುರಾಣಿಕ ಮುಂತಾದ ವಾಸ್ತವ ಮಾರ್ಗದ ಮತ್ತು ಪ್ರಗತಿ ಶೀಲ ಲೇಖಕರ ಕಥೆ ಕಾದಂಬರಿಗಳು ಇವರೆಲ್ಲರೂ ಕನ್ನಡ ಕಾದಂಬರಿಯ ಒಂದು 'ಮಾದರಿಯನ್ನು' ಅತ್ಯಂತ ಜನಪ್ರಿಯಗೊಳಿಸಿದ್ದರು. ಆ ಮಾದರಿ ಸುಶಿಕ್ಷಿತ ಹಾಗೂ ಮಧ್ಯಮವರ್ಗದ ಜನರ ಭಾಷೆ ನಗರೀಕೃತ, ಮಧ್ಯಮ ವರ್ಗಗಳ ಜೀವನ, ಅವರ ಚಟುವಟಿಕೆ, ಚುರುಕಾದ ಸಂಭಾಷಣೆಯಿಂದ ಕಾದಂಬರಿಗಳು ಓದುಗರನ್ನು ಉನ್ನತ ಭಾವುಕರನ್ನಾಗಿ ಮಾಡಿ ಆಸಕ್ತಿಯನ್ನು ಕೆರಳಿಸುವಂತೆ ಮಾಡಿತ್ತಿದ್ದುದ್ದಲ್ಲದೆ ಓದುಗರ ವೈಚಾರಿಕತೆ ಮತ್ತು ಭಾವನಾತ್ಮಕ ವ್ಯಕ್ತಿತ್ವವನ್ನು ತಮ್ಮ ಲಕ್ಷ್ಯದಲ್ಲಿರಿಸಿಕೊಂಡಿದ್ದರು. ವಿಶೇಷವಾದ ಯಾವುದೇ ವಿಷಯವನ್ನು ಕೂಲಂಕೂಷವಾಗಿ ವಿಶ್ಲೇಷಿಸಿ ತಲ್ಲಣಗೊಳಿಸಿದೆ ಓದುಗರನ್ನು ಮೂಕರಾನ್ನಾಗಿಸುವಂತಹ ಸ್ವಾರಸ್ಯಕರವಾದ ವಿಶೇಷ ವಿಷಯಗಳ ಬಗೆಗೆ ಹೆಚ್ಚು ಒಲವು ತೋರಿಸಿದರು.

ಪ್ರತಿ ಕುಟುಂಬದಲ್ಲಿಯೂ ನಡೆಯುವ ವೈವಾಹಿಕ ಪಾವಿತ್ರ್ಯ ಸೇವೆ ತ್ಯಾಗಗಳ ಮೂರ್ತಿಯಾದ ಸ್ತ್ರೀ ಪಾಶ್ಚ್ಯಾತೀಕರಣದ ಭೀಕರ ಪರಿಣಾಮ ಮತ್ತು ಅನೇಕ ಕಾರಣಗಳಿಂದ ಆಧುನಿಕ ಭಾರತದಲ್ಲಿ ಏನೋ ಕಳೆದು ಹೋಗಿದೆಯೆಂದು ಭೀತರಾಗಿದ್ದ ಓದುಗರಿಗೆ ಇವರ ಕೃತಿಗಳು ಒಂದು ವಿಧದ ಸಾಂತ್ವಾನ ನೀಡುತ್ತಿದ್ದವು.

ಶಿಕ್ಷಣ ಸೌಲಭ್ಯವು ಹೆಚುತ್ತಿದ್ದಂತೆ ಕನ್ನಡ ಓದುಗರ ವರ್ಗವೂ ಹೆಚ್ಚುತ್ತಿದ್ದ ಸಂದರ್ಭದಲ್ಲಿ ತ್ರಿವೇಣಿಯವರ ಕಾದಂಬರಿಗಾಗಿ ಸದಾ ಹಾತೊರಿಯುತ್ತಿದ್ದರು. ಭಾರತೀಯ ಸಾಹಿತ್ಯ ನಿರ್ಮಾಪಕರು ತ್ರಿವೇಣಿ(ಅನುಸೂಯ ಶಂಕರ್) ಪುಸ್ತಕದ ರಚನಾಕಾರರಾದ ಸಿ.ಎನ್ ರಾಮಚಂದ್ರನ್ ರವರೇ ತಮ್ಮ ಪ್ರಸ್ತಾವನೆಯಲ್ಲಿ ಹೇಳಿಕೊಂಡಿರುವಂತೆ 'ಅಂದಿನ ದಿನಗಳಲ್ಲಿ ಅನಕೃ, ತರಾಸು ಅವರ ಕಾದಂಬರಿಗಳಿಗೆ ಅತುರದಿಂದ ಕಾಯಿತ್ತಿದ್ದಂತೆ ತ್ರಿವೇಣಿಯವರ

ಕಾದಂಬರಿಗಳಿಗೆ ಕಾಯುತ್ತಿದ್ದೆ. ಈ ಮಾತುಗಳು ತ್ರಿವೇಣಿಯವರ ಕೃತಿಗಳ ಪ್ರಭಾವವನ್ನು ಸೂಚಿಸುತ್ತದೆ.

ಕೇವಲ ಸಮಾಜಿಕ ಕಾದಂಬರಿಗಳಲ್ಲದೆ ಮನೋ ವೈಜ್ಞಾನಿಕ ಕಾದಂಬರಿಗಳ ಬಗೆಗೂ ಹೆಚ್ಚಿನ ಆಸಕ್ತಿ ವಹಿಸುವಂತೆ ಮಾಡಿದ್ದು ಅವರ ಪ್ರತಿಭಗೆ ಸಾಟಿಯೇ ಸರಿ. ಕಲೆಯಲ್ಲಿ ಮನಶ್ಯಾಸ್ತ್ರವನ್ನು ಬಳಸಿಕೊಂಡು ವಾಸ್ತವಿಕತೆಗೆ ಸಮೀಪಿಸಿ

ಮನೋವೈಜ್ಞಾನಿಕ ಕಾದಂಬರಿಗಳ ಬಗೆಗೂ ಹೆಚ್ಚಿನ ಆಸಕ್ತಿವಹಿಸುವಂತೆ ಮಾಡಿದ್ದು ಅವರ ಪ್ರತಿಭೆಯೆ ಸರಿ. ಕಲೆಯಲ್ಲಿ ಮನಶ್ಯಾಸ್ತ್ರವನ್ನು ಬಳಸಿಕೊಂಡು. ವಾಸ್ತವಿಕತೆಗೆ ಸಮೀಪಿಸಿ ಓದುಗರನ್ನು ಮಂತ್ರಮುಗ್ದರಾಗಿಸಿ ಅವರನ್ನು ಬೇರೊಂದು ಪ್ರಪಂಚಕ್ಕೆ ಕೊಂದೊಯ್ಯುವ ಕಲೆ ಇವರಿಗೆ 'ವರವೇ ಸರಿ'.

ಇವರ ಮೊದಲ ಮನೋವೈಜ್ಞಾನಿಕ ಕಾಂಬರಿಯಲ್ಲಿ ಕಿಶೋರಾವಸ್ಥೆಯ ಕುಸುಮಾ 'ಸ್ಥಾನಂತರ' (Displacement) ಎಂಬ ಮಾನಸಿಕ ವೈಕಲ್ಪವನ್ನು ರಕ್ಷಣಾ ತತ್ರದಂತೆ ಬಳಸಿಕೊಂಡು ನರಳುವುಕೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ಮಕ್ಕಳನ್ನು ಅತಿಮುದ್ದಿನಿಂದಲೂ ಹಾಗೂ ಅತಿ ದಂಡನೆಯಿಂದಲೂ ಬೆಳೆಸುವುದು ಅವರ ಮೇಲೆ ಪರಿಣಾಮ ಬೀರುತ್ತವೆ ಎಂಬುದು ಬಗೆಗೆ ಕುಸುಮಳನ್ನು ಮೂಲಕ ತಮ್ಮ ಪ್ರತಿಭ ಕೌಶಲ್ಯವನ್ನು ಚಿತ್ರಿಸಿದ್ದಾರೆ.

ಕುಸುಮಳ ಮಾನಸಿಕ ಅಸ್ಥಸ್ಯಾ ಸಹಜವೇ ಎಂದು ಓದುಗರಿಗೆ ಭಾಸವಾಗುವಂತೆ ಅವಳ ಬಾಲ್ಯ ಹಾಗೂ ಕಿಶೋರಾವಸ್ಥೆಯನ್ನು ಅತ್ಯಂತ ಎಚ್ಚರದಿಂದ ಕ್ರಮಕ್ರಮವಾಗಿ ಚಿತ್ರಿಸಿದ್ದಾರೆ.

ಕುಸುನಳಿಗೆ ಮಲತಾಯಿ ಪದ್ಮಳಿಂದ ಆಗುವ ತಿರಸ್ಕಾರ ದ್ವೇಷದ ಅನುಭವಗಳನ್ನು ಕುಸುಮ ಮತ್ತು ಅದ್ಮಳ ಸಂಭಾಷಣೆಯನ್ನು ನಾಡಕೀಯ ಶೈಲಿಯಲ್ಲಿ ವಿವರಿಸಿರುವುದು ಮನಮುಟ್ಟುವಂತೆ ಚಿತ್ರಿಸಿದ್ದಾರೆ.

'ಪ್ರಕೃತಿಯ ರುದ್ರನಾಟ್ಯ ಕನಸಿನ ಭೀಕರತೆ, ಕುಸುಮ ಬೇಟೆಗಾರರಿಂದ ಸುತ್ತುವರಿಯಲ್ಪಟ್ಟ ಮೊಲದಂತೆ ಕುಸುಮ ತಲ್ಲಣಿಸುವಿಕೆ. ಕುಸುಮಳಿಗೆ ತನ್ನ ತಂದೆಯ ಮೋಸದ ಅರಿವು ಇವೆಲ್ಲಾ ಮುಂದೆ ಹೋದಲು ಆಸಕ್ತಿ ಕೆರಳಿಸುವಂತೆ ಮಾಡುತ್ತದೆ. ಮಲತಾಯಿ ಪದ್ಮಳ ಪಾತ್ರ ಚಿತ್ರಣದಲ್ಲಿ ಅವಳನ್ನು ದ್ವೇಷಿಸುವಂತೆ ಹೃದಯಹೀನ ಕ್ರೂರಿ ಮತ್ತು ಸ್ವಾರ್ಥಿಯ ಪಡಿಯಚ್ಚುನಲ್ಲಿ ಬರುವುದು ಸ್ವಾಭಾವಿಕ ಆದರೆ ಲೇಖಕಿ ಈ ದ್ವೇಷದ ಭಾವನರಯನ್ನು ಮೀರಿ ಸ್ವತಃ ಅನ್ಯಾಯಕ್ಕೊಳಗಾಗಿ ತನಗಾದ ಅನ್ಯಾಯವನ್ನು ತನ್ನ ಮಲಮಗಳ ಮೇಲೆ ತೀರಿಸಿಕೊಳ್ಳುವ ಪದ್ಮಳ ಪಾತ್ರವನ್ನು ತುಂಬಾ ಅನುಕಂಪದಿಂದ ಚಿತ್ರಿಸಿದ್ದಾರೆ.

ಪದ್ಮಳು ತಾನು ಮದುವೆಯಾಗುವವರ ಬಗ್ಗೆ ನೂರಾರು ಕನಸು ಕಟ್ಟಿ ಕಾತರತೆಯಿಂದ ಕಾಯುತ್ತಿರುವಾಗ ಚಿಕ್ಕ ಮಗಳುಳ್ಳ ವಿದುರನೊಡನೆ ಮದುವೆ ನಿಶ್ಚಯವಾಗುತ್ತದೆ. ಪದ್ಮಳ ತಂದೆಗೆ ವರದಕ್ಷಿಣೆ ಕೊಡಲು ಅಸಮರ್ಥವಾದುದರಿಂದ ಮತ್ತು ಅವಳು ನೋಡಲು ಅಷ್ಟೇನೂ ರೂಪವತಿಯಲ್ಲದುದರಿಂದ ಆ ಮದುವೆಗ ಬಲವಂತವಾಗಿ ಪದ್ಮ ಒಪ್ಪಲೇ ಬೇಕಾಗುತ್ತದೆ. ಲೇಖಕಿ ಈ ಸನ್ನಿವೇಶದಲ್ಲಿ ಪದ್ಮಳ ಮನಸ್ಥತಿಯನ್ನು ತುಂಬಾ ಸಹನುಭೂತಿಯಿಂದ ವಿಶ್ಲೇಷಿಸಿದ್ದಾರೆ.

ಆದರೆ ತನ್ನ ದ್ವೇಷದಿಂದ ಕುಸುಮಾ ಮನೋವೈಕಲ್ಪವನ್ನು ತುತ್ತಾಗಿ ಚಿಕಿತ್ಸಾಲಯನ್ನು ಸೇರಬೇಕಾಗಿ ಬಂದಾಗ ಅವಳೀಗೆ ನಿಜವಾಗಿಯೂ ದುಃಖವಾಗುತ್ತದೆ. ವೈದ್ಯರೊಂದಿಗೆ ತನ್ನ ತಪ್ಪೆಲ್ಲವನ್ನು ಅವಳು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಾಳೆ. ಪಾಶ್ಚಾತಾಪ ಪಡುತ್ತಾಳೆ ವೈದ್ಯರ ಸಲಹೆಯಂತೆ ಕುಸುಮಳಿಗೆ ಗುಣವಾಗುವ ತನಕ ತಾಳ್ಮೆಯಿಂದ ಅವಳನ್ನು ಆಸ್ಪತ್ರೆಯಲ್ಲಿ ಭೇಟಿಮಾಡುತ್ತೀರುತ್ತಾಳೆ.

ಆಸ್ಪತ್ರೆಯಲ್ಲಿರುವ ಸ್ತ್ರೀ ರೋಗಿಗಳೆಲ್ಲರೂ ಹೊರಗಿನ ಕ್ರೂರ ಪ್ರಪಂಚದಿಂದ ಇಲ್ಲಿಗೆ ತಳ್ಳಲ್ಪಟ್ಟವರೇ, ತ್ರಿವೇಣಿಯವರ ಅನೇಕ ಕಾದಂಬರಿಗಳಲ್ಲಿ ಕಂಡು ಬರುವ ಸಫಲ 'ಸಮೂಹ ದೃಶ್ಯ ಚಿತ್ರಣ' ಮೊದಲ ಬಾರಿಗೆ ಈ ಕಾದಂಬರಿಯಲ್ಲಿ ಬರುತ್ತದೆ.

ದೂರದ ಬೆಟ್ಟ ಕಾದಂಬರಿಯಲ್ಲಿ ತಾಯಿ ಮಗಳ ಅನ್ಯೋನ್ಯತೆ ತ್ರಿವೇಣಿಯವರು ಸೌಂದರ್ಯ ಪ್ರಜ್ಞೆಯನ್ನು ಸುನಂದಳ ಮುಖಾಂತರ ತೋರ್ಪಡಿಸಿದ್ದಾರೆ. ಪೋಷಕರು ಬೆಳೆದ ಮಗಳಿಗೆ ವಿವಾಹ ಮಾಡುವ ಪ್ರಯತ್ನ ಶುಭ ಸಮಾರಂಭಗಳಿಗೆ ಹೋದಲ್ಲೆಲ್ಲಾ ಅವಕಾಶವನ್ನು ಬಳಸಿಕೊಳ್ಳುವ ಸ್ತ್ರೀಯರ ಮಾತು ಯೋಚಿಸುವ ಬಗೆಯನ್ನು ವಾಸ್ತವವಾಗಿ ಚಿತ್ರಿಸಿದ್ದಾರೆ.

ಸುನಂದ ಮತ್ತು ಶೇಖರ ವಿವಾಹದ ನವ ದಂಪತಿಗಳ ಪ್ರೇಮಸಲ್ಲಾಪವನ್ನು ಚಿತ್ರಿಸುವಲ್ಲಿ ತ್ರಿವೇಣಿಯವರ ರಸಿಕತೆಯು ನದಿಯಂತೆ ಸರಾಗವಾಗಿ ಹರಿದಿದೆ. ಸುನಂದ ಶ್ರೀಧರನ ಪ್ರೇಮ ಅಂಕುರಿಸುವಿಕೆಯನ್ನು ತ್ರೀವೇಣಿಯವರು ಸೊಗಸಾಗಿ ಚಿತ್ರಿಸಿದ್ದಾರೆ.

ಪ್ರೇಮ ಸರಸ ಸಲ್ಲಾಪಗಳ ನಡುವೆ ಹಾಸ್ಯದ ಹೊನಲನ್ನು ತಂದಿದ್ದಾರೆ. ಸೀತಾರಾಮು ದಮಯಂತಿ ಮಾತನಾಡದೆ ಇದ್ದ ಸಂದರ್ಭದಲ್ಲಿ ಒಂದು ಹಾಸ್ಯವನ್ನು ಹೇಳಿಸುತ್ತಾರೆ "ಮದುವೆಗೆ ಮುಂಚೆ ಗಂಡ ಮಾತಾನಾಡುತ್ತದ್ದಾನಂತೆ ಅವಳು ಕೇಳುತ್ತಿದ್ದಾಳಂತೆ, ಹನಿಮೂನ್ ಸಮಯದಲ್ಲಿ ಅವಳು ಮಾತನಾಡುತ್ತಿದ್ದಾಳಂತೆ, ಅವನು ಕೇಳುತ್ತಿದ್ದಾನಂತೆ, ಸಂಸಾರ ಹೂಡಿದ ಮೇಲೆ ಇಬ್ಬರೂ ಮಾತನಾಡುತ್ತಿದ್ದಾರಂತೆ, ನೆರೆಹೊರೆಯವರು ಕೇಳುತ್ತಿದ್ದರಂತೆ", ಎಂದು ಅಲ್ಲಲ್ಲಿ ಹಾಸ್ಯ ಚಟುವಟಿಕೆಗಳನ್ನು ಸಿಡಿಸಿ, ಮನೋಲ್ಲಾಸ ಮಾಡುವ ಶೈಲಿ ವಿಶೇಷವಾಗಿದೆ.

ಸಂಪ್ರದಾಯ ಮತ್ತು ಆಧುನಿಕತೆಗೂ ಇರುವ ಅಂತರವನ್ನು ದಮಯಂತಿಯ ಅಜ್ಜಿ ಮತ್ತು ಸುನಂದಳ ಮಾತಿನಲ್ಲಿ ವಿವರಿಸಿದ್ದಾಳೆ. ಸ್ತ್ರೀಯು ತ್ಯಾಗಮೂರ್ತಿಗಳ ಪ್ರತೀಕ

ಎಂಬುದನ್ನು ಮತ್ತೆ ಸುನಂದಳ ಮೂಲಕ ನಿರೂಪಿಸಿದ್ದಾಳೆ. ನವದಂಪತಿಗಳು ವಸ್ತುಪ್ರದರ್ಶನಕ್ಕೆ ಹೋದಾಗ ಸುನಂದ ಅಂಗಡಿಯ ಮುಂದೆ ತೋರಣಗಳಂತೆ ಹಾಕಿದ್ದ ರಂಗುರಂಗಿನ ಸೀರೆಗಳನ್ನು ನೋಡಿ,'ಆ ಕಪ್ಪು ಸೀರೆ ಎಷ್ಟು ಚೆನ್ನಾಗಿದೆ ಅಲ್ಲವಾ?', ಎಂದಳು. ಶೇಖರ
'ಸೀರೆ ಬೇಕಾದರೆ ತಗೋ',
'ನೀವಿನ್ನು ವಿದ್ಯಾರ್ಥಿ ನೀವು ಸಂಪಾದಿಸೋಕೆ ಶುರುಮಾಡಿದ ಮೇಲೆ ತೆಗೆದುಕೊಂಡಿರುವಂತೆ ಎಂದಳು'.

ಸುನಂದ ಮದುವೆಯ ತರುಣದಲ್ಲಿ ಪತಿಯಿಂದ ದೂರವಿದ್ದು, ಪತಿಯ ಓದಿಗಾಗಿ ಪ್ರೋತ್ಸಾಹಿಸುವ ಗುಣಗಳನ್ನು ಇಲ್ಲಿ ಅರ್ಥವತ್ತಾಗಿ ವಿವರಿಸಿದ್ದಾರೆ.

ಅಲ್ಲಲ್ಲಿ ಸ್ತ್ರೀ ಶೋಷಣೆಯು ಇಣುಕಿ ನೋಡುವ ಪ್ರಯತ್ನವನ್ನು ಮಾಡಿದ್ದಾರೆ. ಶೇಖರನ ವಿವಾಹವಾಗುವ ಸಂದರ್ಭದಲ್ಲಿ ಸುನಂದಳಿಗೆ ಆಗುವ ಭಯವು ಇದನ್ನು ವ್ಯಕ್ತ ಪಡಿಸುತ್ತದೆ.

ಶೇಖರನ ಮರಣಾನಂತರ ಸುನಂದಳು ಮರು ಮದುವೆಯಾಗಲು ತಂದೆ ತಾಯಿ ಅಣ್ಣ ಪ್ರೋತ್ಸಾಹಿಸುವಿಕೆಯನ್ನು ಅವರಲ್ಲಿನ ವೈಚಾರಿಕತೆ ಆಧುನಿಕ ಮನೋಬಾವವನ್ನು ನಿರ್ದೇಶಿಸಿದೆ.

ಸಮಾಜದ ದುರ್ನಡತೆಗೆ ಕಾರಣ ಸಮಾಜದಲ್ಲಿನ ಪ್ರೌಢಾವಸ್ಥೆಯಲ್ಲಿ ನಿರ್ಬಂಧಗಳನ್ನು ಹೇರುವುದರಿಂದ ಅವರಲ್ಲಿ ಯಾವುದನ್ನು ಕೂಡದು ಎಂದು ನಿಷೇಧಿಸಿದ್ದರೆ, ಅವರು ಅದನ್ನೆ ಮಾಡಲು ಮುಂದಾಗುತ್ತಾರೆ. ಆ ವಯಸ್ಸಿನಲ್ಲಿ ಮುಕ್ತವಾಗಿ ಸಲುಗೆಯಿಂದ ಸ್ನೇಹಯುತವಾಗಿ ಬಿಡಬೇಕು ಆಗ ಅವರಲ್ಲಿ ನಂಬಿಕೆ ವಿಶ್ವಾಸಗಳು ಮೂಡಿ ದುರ್ನಡತೆಗಳು ಮಾಯಾವಾಗುತ್ತವೆ ಎಂಬುದನ್ನು ಸುನಂದಳ ಮಾತಿನ ಮೂಲಕ ಸಮಾಜದ ಮೇಲಿನ ಜವಾಬ್ದಾರಿಯನ್ನು ಕಳಕಳಿಯನ್ನು ಪ್ರತಿಬಿಂಬಿಸುತ್ತದೆ.

ವೆಂಕತ್ತೆಯ ಪಾತ್ರವು ಕಾದಂಬರಿಯಲ್ಲೆ ಪ್ರಮುಖ ತಿರುವು ಆಗಿರುತ್ತದೆ. ವೆಂಕತ್ತೆಯು ಜೀವಂತವಾಗಿರದಿದ್ದರೂ, ಅವಳ ಪ್ರಭಾವ ಸುನಂದೆಯ ಮೇಲಾಗಿ ಅವಳು ಮನೋವೈಕಲ್ಪಕ್ಕೆ ಒಳಗಾಗುವಿಕೆಯನ್ನು ತುಂಬಾ ಜಾಣ್ಮೆಯಿಂದ ಚಿತ್ರಿಸಿದ್ದಾರೆ.

ಮುಚ್ಚಿದ ಬಾಗಿಲು ಕಾದಂಬರಿಯು ಮಾನಸಿಕ ಚಿಕಿತ್ಸಾಲಯದ ವೈದ್ಯನ ಮತ್ತು ಆತನಲ್ಲಿ ರೋಗಿಗಳ ಸುತ್ತ ಹೆಣೆದ ಒಂದು ಮನೋವೈಜ್ಞಾನಿಕ ಕಾದಂಬರಿ, ಬಗೆಬಗೆಯ ಚಿತ್ತವಿಕಾರಗಳಿಗೆ ಪಕ್ಕಾದವರ ಕಥೆಗಳಿಂದ ಕಾದಂಬರಿ ತುಂಬಿದೆ.

ಕೇವಲ ರೋಗ ದಾಖಲೆಗಳೆ ತುಂಬಿರುವ ಈ ಕಾದಂಬರಿಯ ಒಂದು ಧನಾತ್ಮಕ ಆಂಶವೆಂದರೆ ಬಿಡಿಬಿಡಿಯಾದ ಅನೇಕ ಕಥೆಗಳನ್ನು ಒಂದುಗೂಡಿಸುವ ಆವರಣ ಅಥವಾ ಚೌಕಟ್ಟು ಎಲ್ಲರ ಕಥೆಯನ್ನೆ ನಿರೂಪಿಸುವ ಮನೋವಿಜ್ಞಾನಿಯು ತನ್ನದೇ ಆದ ಒಂದು ಕಥೆಯಿರುತ್ತೆ. ವೈದ್ಯ ಮತ್ತು ಹೆಂಡತಿ ಹೇಮಳ ಸಂಭಾಷನೇ ಪ್ರೇಮ ಮುನಿಸುಗಳು ಅದನ್ನು ಹಿನ್ನೋಟ ಕ್ರಮದಲ್ಲಿ ವಿವರಿಸುತ್ತಾ ಹೋಗುವುದು ಸೊಗಸಾಗತಿದೆ.

ತ್ರೀವೇಣಿಯವರು ಸ್ತ್ರೀ ಸಮಸ್ಯೆಗಳನ್ನು ವಿವರಿಸಿದರೂ ಪುರುಷರ ಸಮಸ್ಯೆಗಳ ಬಗೆಗೂ ಗಮನ ನೀಡಿರುವದು ಇಲ್ಲಿ ಗಮನಾರ್ಹವಾಗಿದೆ. ವೈದ್ಯ ಪ್ರತಿದಿನ ಕ್ಷೌರ ಮಾಡಿಕೊಳ್ಳಲು ಬೇಸತ್ತು ಮಾತಾನಾಡುವ ಮಾತು ಅದನ್ನು ಪ್ರತಿಬಿಂಬಿಸುತ್ತದೆ.

ಬೆಳಗಾಗೆದ್ದು ಈ ಹಾಳು ಕ್ಷೌರ...... ಗಂಡಸರಿಗೆ ಇದೊಂದು ಶಿಕ್ಷೆ ಹೆಂಗಸರಿಗೆ ಈ ಹಾಳು ತಾಪತ್ರಯವೇ ಇರೋದಿಲ್ಲ...... ದಿನ ಬೆಳಗಾದರೆ ಕನ್ನಡಿ ಮುಂದೆ ಕೂತ್ಕೊಂಡು ಬ್ಲೇಡ......

ಮಾನಸಿಕ ಚಿಕಿತ್ಸಾಲಯದಲ್ಲಿರುವ ರೋಗಿಗಳು ಮತ್ತು ಅವರ ವರ್ತನೆಗಳನ್ನು ವಾಸ್ತ ವಕ್ಕೆ ಹತ್ತಿರವಾಗಿ ವಿವರಿಸುವ ತ್ರೀವೇಣಿಯವರು ಆಸ್ಪತ್ರೆಯಿಂದ ಹೊರಗಿರುಲವ ನಮಗೂ ಆಸ್ಪತ್ರೆಯ ಒಳಗೆ ಇರುವ ರೋಗಿಗಳಿಗೂ ವ್ಯತ್ಯಾಸವನ್ನು ಹುಡುಕುತ್ತಾ–

"ನಮ್ಮ ಮನದ ಬಾಗಿಲು ಯಾವಾಗಲೂ ಮುಚ್ಚಿರುತ್ತದೆ ಆದುದರಿಂದ ಹೊರಗಿನವರಿಗೆ ನಾವು ನಯವಾಗಿ ನಾಗರೀಕರಾಗಿ ಕಾಣುತ್ತೇವೆ. ಮನಸ್ಸಿನಲ್ಲಿ ಅಸಭ್ಯತೆಯಿದ್ದರೂ ನಾಲಿಗೆ ಸಭ್ಯತನದ ಮಾತುಗಳನ್ನಾಡುತ್ತದೆ."

ಮುಚ್ಚಿದ ಬಾಗಿಲು ತೆರೆದುಕೊಂಡರೆ?

ಆಗ ಮನಸ್ಸಿನ ಹುಳುಕು, ಅಸಭ್ಯತನ, ಕೊಳೆ ಹೊರಗಿನವರಿಗೆ ಗೋಚರವಾಗುತ್ತದೆ. ಒಂದು ವಿಧದಲ್ಲಿನಮಗಿಂತಲೂ ಮಾನಸಿಕ ರೋಗಿಗಳಿಂದ ನರಳುವವರೇ ನಿಷ್ಕಪಟಿಗಳು ನಾವು ಎಲ್ಲವನ್ನು ಮುಚ್ಚಿಡುತ್ತೇವೆ. ಅವರು ಮನಸ್ಸಿಗೆ ಬಂದುದನ್ನು ಬಾಯಲ್ಲಿ ಆಡಿತೋರಿಸಿ 'ಹುಚ್ಚರು' ಎಂದೆನಿಸಿಕೊಳ್ಳುತ್ತಾರೆ. ಎಂದು ಹುಚ್ಚರು ಹುಚ್ಚರಲ್ಲದವರ ನಡುವಿನ ವ್ಯತ್ಯಾಸದಿಂದ ಸಮಾಜದ ಹುಳುಕನ್ನು ಬಿಚ್ಚಿ ತೋರಿಸಿದ್ದಾರೆ.

ಮಾನಸಿಕ ರೋಗಿಗಳಾಗಿ ಬರುವ ಸುಂದರರಾಜ್ ಸೋಮಶೇಖರ್, ತಾರಾ, ರೀಟಾ, ಕನಕ, ಇವರುಗಳ ಮನೋವೈಕಲ್ಯವನ್ನು ಮನಮುಟ್ಟುವಂತೆ, ಹೊಸದಾಗಿ ಮನಶಾಸ್ತ್ರದ ಬಗೆಗೆ ತಿಳಿಯುವವರ ಬಗೆಗೆ. ಅದರ ರೋಗಗಳ ವಿವರವಾದ ಚಿತ್ರಣವನ್ನು ಹಂತ–ಹಂತವಾಗಿ ನೀಡುತ್ತಾರೆ. ವೈದ್ಯರು. ಆ ರೋಗಗಳನ್ನು ಪತ್ತೆ ಹಚ್ಚುವಲ್ಲಿ ಹಾಗೂ ರೋಗಿಗಳ ನಡುವೆ ನಡೆಸುವ ಸಂಭಾಷಣೆ ಸರಳವಾಗಿ ಕಂಡರೂ ಅವು ಮನೋವೈಜ್ಞಾನಿಕದ ಪರೀಕ್ಷೆಗಳಾಗಿದ್ದವು.

ಮನಶಾಸ್ತ್ರದ ಪರೀಕ್ಷೆಗಳನ್ನು ಮಾಡುವುದರ ಮುಖಾಂತರ ಅವರನ್ನು ಸಮಸ್ಯೆಗಳಿಂದ ಮುಕ್ತಿಗೊಳಿಸಿ ತುಂಬಾ ಹರ್ಷಿಸುವ ವೈದ್ಯನೇ ಇಲ್ಲಿ ಪ್ರಿಯವಾಗಿ ಕಾಣುತ್ತಾನೆ.

ರೋಗಿಯು ಹೇಳಿದ ಸಮಯಕ್ಕೆ ಬರಲಿಲ್ಲ ಎಂದು ಅವರ ಬರುವಿಕೆಯನ್ನು ಕಾಯುವ ವೈದ್ಯ ಅವ ನಲ್ಲಿಯ ಕರ್ತವ್ಯ ನಿಷ್ಠೆಯಜೊತಿಗೆ ರೋಗಿಗಳ ಮೇಲಿರುವ ಮಮತೆಯನ್ನು ಸೂಚಿಸುತ್ತದೆ.

ತಾರಾಳ ವಿಷಯದಲ್ಲಿ ತಾನು ಅವಳನ್ನೆ ರೋಗದಿಂದ ಮುಕ್ತಗೊಳಿಸಬೇಕೆಂಬ ಛಲದಲ್ಲಿ ಕೈಗೊಳ್ಳುವ ಪರೀಕ್ಷೆಗಳು ಅವನೇಯ ಕರ್ತವ್ಯ ನಿಷ್ಠೆಯನ್ನು ಎದ್ದು ತೋರಿಸುತ್ತದೆ.

ಇವಲ್ಲಾದರ ನಡುವೆ ಹೆಂಡತಿ ಹೇಮ ತನ್ನ ಪತಿಗೆ ಎಲ್ಲ ತರಹದ ಸಹಾಯವನ್ನು ಸಹಕಾರವನ್ನು ನೋಡಿ ಪತಿಯನ್ನು ಪ್ರೇಮ ಅಧರದಿಂದ ಕಾಣುವ ಗುಣಗಳು ಮತ್ತೇ ಸ್ತ್ರೀಯ ತ್ಯಾಗಮಯಿ ಮಮತೆಯ ಗುಣಗಳನ್ನು ತಿಳಿಸುತ್ತವೆ.

ಆಸ್ಪತ್ರೆಯಲ್ಲಿ ಬರುವ ರೋಗಿಗಳನ್ನು ಅವರ ಮಾನಸಿಕ ವಿಕಲತೆಯನ್ನು ಹೆಂಡತಿ ಹೇಮಳಲ್ಲಿ ಹೇಳಿ ತನ್ನ ಮನಸ್ಸಿನ ಭಾರವನ್ನು ಕಡಿಮೆ ಮಾಡಿಕೊಳ್ಳುವಿಕೆ ಅವರ ಅನ್ಯೋನ್ಯತೆಯನ್ನು ಚಿತ್ರಿಸುತ್ತದೆ.

ವಿವಿಧ ರೋಗಗಳನ್ನು ತೆಗೆದುಕೊಂಡು ಅವುಗಳನ್ನು ಬಗೆಹರಿಸಿದರೂ ಯಶಸ್ವಿಯಾದಂತೆ ಕಾಣದೆ ಇರುವುದು ತೋರುತ್ತದೆ ಏಕೆಂದರೆ ಎಷ್ಟು ಮುಚ್ಚಿದ ಬಾಗಿಲುಗಳು ಇನ್ನು ಬಾಳಲ್ಲಿ ಬೆಳಕಿಲು ಕಾಣದೆ ಕತ್ತಲೆಯಲ್ಲಿರುವುಲದು ಎಂದು ಒಂದು ಕಡೆ ಎನಿಸಿದರೂ ಹೊರಗಿನ ಪ್ರಪಂಚದ ದುಷ್ಟತೆಗಳಿಂದ ಮುಳುಗಿದ್ದು, ಜನರ ನಡುವೆ ಇರುವುದಕ್ಕಿಂತ ಕಪಟಗಳನ್ನು ದೂರವಿರಿಸಿ ಮುಕ್ತಾ ಮನಸ್ಸಿಂದ ವರ್ತಿಸುವ ಜನರ ನಡುವೆ ಇರುವ ಈ ಆಸ್ಪತ್ರೆಯೇ ಕಪಟ ಮೋಸ ಅರಿಯದ ಪ್ರಪಂಚ ಎಂದು ಪ್ರಸ್ತುತಪಡಿಸಿದ್ದಾರೆ.

ಇವನ ನಾಲ್ಕನೇ ಕಾದಂಬರಿ 'ಶರಪಂಜರ' ೧೯೭೧ರಲ್ಲಿ ಚಲನಚಿತ್ರವಾಗಿ ಬೆಳಕು ಕಂಡಿತು. ಈ ಕಾದಂಬರಿಯು ಪ್ರಚಂಡವಾದ ಜನಪ್ರಿಯತೆ ಗಳಿಸಿಕೊಂಡಿದೆ.

ಪ್ರಸವವೇದನೆಯಲ್ಲಿ ಸನ್ನವೇಶದಲ್ಲಿ ಉಂಟಾದ ಅಶಕ್ತತೆಯೊಂದು ಆಂತರ್ಯದಲ್ಲಿದ್ದ ಅಪರಾಧದ ಅಂಜಿಕೆಯೊಂದು ಜಾಗೃತಗೊಂಡಾಗ, ಚಿತ್ತಸ್ವಾಸ್ಥ್ಯ ಕಳೆದುಕೊಂಡು ಜೀವನದಲ್ಲಿ ನೆಮ್ಮದಿಯಿಂದ ವಂಚಿತಗಳಾಗಿ ಹುಚ್ಚಾಸ್ಪತ್ರೆಗೆ ಹೋಗುವಲ್ಲಿಗೆ ಮುಗಿಯುತ್ತದೆ. ಈ ಚೌಕಟ್ಟಿನಲ್ಲಿ ಅಲ್ಲಲ್ಲಿ ಕಾಣಿಸಿಕೊಳ್ಳದ ಕಾವೇರಿಯ ವಿಲಾಸದ ಜೀವನ ಕುಟುಂಬದ ಮೇಲಿನ ಪ್ರೀತಿ, ಒಡೆತನ ಜಾಣ್ಮೆ ಇವುಗಳನ್ನು ವಿವರಿಸುವಲ್ಲಿ ಅಸೂಯೆ ಪಡುವಂತಹ ಸೌಂದರ್ಯಯುತ ಹೆಣ್ಣು ಎಂದು ಅವರ ಸೌಂದರ್ಯಪ್ರಜ್ಞೆಯನ್ನು ಹೇಳುವಲ್ಲಿ ಅಸೂಯೆ ಮನೋಬಾವ ಕಂಡಿತ ತಲೆದೋರುವಂತೆಯೇ ಚಿತ್ತಿತವಾಗಿದೆ.

ಸತೀಶ ಅವಳ ಮೇಲೆ ತುಂಬಾ ಅವಲಂಬಿತವಾಗಿರುವಿಕೆ, ಅವಳ ಸೌಂದರ್ಯ ಹಾಳಾಗಬಾರದೆಂದು ಸತೀಶ ಅವಳ ಸೌಂದರ್ಯಕ್ಕೆ ಸಲಹೆಗಳನ್ನು ನೀಡುವುದು ಅವಳ ಮೇಲೆ ಇರುವ ಅತೀತವಾದ ಪ್ರೀತಿಯನ್ನೆ ವ್ಯಕ್ತಪಡಿಸುತ್ತದೆ. ಸಾಮಾನ್ಯವಾಗಿ ಕಾದಂಬರಿಗಳ ಇಇರುವಂತೆ ಶಿಷ್ಟ-ದುಷ್ಟ ಎಂಬ ವರ್ಗಗಳು ಈ ಕಾದಂಬರಿಯಲ್ಲಿ ಅನ್ವಯಿಸುವುದಿಲ್ಲ. ಕಾವೇರಿ ಮಾನಸಿಕ ಆಸ್ಪತ್ರೆಯಿಂದ ಪೂರ್ಣ ಗುಣಮುಖಳಾಗಿ ಹಿಂತಿರುಗಿದ್ದರೂ ಸತೀಶನಿಗೆ ಹಿಂದಿನ ಕಾವೇರಿಯ ಮೇಲೆ ಇದ್ದ ಪ್ರೀತಿ ಈಗ ಇಲ್ಲವಾಗುತ್ತದೆ, ಅವಳೊಡನೆ ದೇವಿಕ ಸಂಬಂಧವನ್ನು ಏಕೆ? ಮತ್ತು ಯಾವ ಕಾರಣಗಳಿಗಾಗಿ ನಿರಾಕರಿಸುತ್ತಾನೆ ಎಂಬ ಅಂಶವನ್ನು ಲೇಖಕಿ ಸವಿಸ್ತಾರವಾಗಿ

ದಾಖಲಿಸುತ್ತಾರೆ. ಒಮ್ಮೆ ಸತೀಶ ಕಾವೇರಿಯನ್ನು ನೋಡಲು ಆಸ್ಪತ್ರೆಗೆ ಹೋಗಿರುತ್ತಾನೆ. ಕಾವೇರಿ ತಾನು "ಉಟ್ಟ ಬಟ್ಟೆಯನ್ನು ಹರಿದು ಚಿಂದಿ ಚಿಂದಿ ಮಾಡಿಕೊಳ್ಳುತ್ತಿದುದರಿಂದ ಕಾವೇರಿಯ ಮೈ ಮೇಲೆ ಈಗ ಒರಟಾದ ಗೋಣಿಚೀಲವಿತ್ತು. ರೂಮಿನ ಒಂದು ಮೂಲೆಯಲ್ಲಿ ಬರಿಯ ನೆಲದ ಮೇಲೆ ಮಲಗಿ ತನಗೆ ತಾನೇ ಮತನಾಡಿಕೊಳ್ಳುತ್ತಿದ್ದಳು". ಸತೀಶ ಕರವಸ್ತ್ರದಿಂದ ಮೂಗು ಮುಚ್ಚಿಕೊಂಡು ಕಾವೇರಿಯನ್ನು ನೋಡುತ್ತಾ ನಿಂತ ಅವಳ ದೇಹಕಾಂತಿ ಮಾಸಿ ಅವಳು ತನ್ನ ಕಾವೇರಿಯೇ ಎಂಬ ಅನುಮಾನವನ್ನು ಬರಿಸುತ್ತಿತ್ತು.

ಈ ದೃಶ್ಯವನ್ನು ಸತೀಶ ಎಂದಿಗೂ ಮರೆಯಲಾರದವನಾದ ಕಾವೇರಿ ಈಗ ಗುಣಮುಖಿಯಾಗಿದ್ದರೂ ತನ್ನೆದುರಿಗೆ ಇದ್ದ ಹೆಂಡತಿ ಜಾಗದಲ್ಲಿ ಹುಚ್ಚಿ ಕಾವೇರಿಯ ನೆರಳನ್ನು ಕಾಣುತ್ತಾನೆ.

ಅನಂತ ಕಾಲದ ಮಧುಚಂದ್ರದ ಪ್ರಣಯಿಗಳಾಗಿದ್ದ ಸತೀಶ ಈಗ ಒಚಿಟಿ ಪಕ್ಷಿಯಾದ, ಅವನಿಗೆ ಜಗತ್ತು ಶೂನ್ಯವಾಗಿರುವಂತೆ ತೋರಿತು. ಕಾವೇರಿ ಒಂದು ರೀತಿಯ ಮಾನಸಿಕ ನೋವಿನಿಂದ ಬಳಲುತ್ತಿದ್ದರೆ, ಸತೀಶ ಮತ್ತೊಂದು ರೀತಿಯ ಮಾನಸಿಕ ವ್ಯಥೆಯಿಂದ ಕೊರಗಿ ಕಂಗಾಲದ

ಸತೀಶ ತನ್ನ ಹೆಂಡತಿಯ ಸೌಂದರ್ಯವನ್ನು ಆರಾಧಿಸುತ್ತಿದ್ದ ಅವಳಲ್ಲಿ ಅಭಿಮಾನವಿತ್ತು, ಅವಳು ಹೆರಿಗೆಗಾಗಿ ತವರು ಮನೆಗೆ ಹೋಗುವುದನ್ನು ತಡೆದು ಇಲ್ಲೆ ಇರುವಂತೆ ಮಾಡುತ್ತದೆ, ಕಾವೇರಿ ತನ್ನ ಮನೆಯ ಎಲ್ಲಾ ಅಧಿಕಾರವನ್ನು ವಹಿಸಿದ್ದು ಅದನ್ನು ಅವಳು ನಿಭಾಹಿಸುವಲ್ಲಿ ತೋರಿಸುವ ಆಸಕ್ತಿಯನ್ನು ಸ್ತ್ರೀಯು ಯಾವುದರಲ್ಲಿ ಕಡಿಮೆಯಿಲ್ಲ ಎಂಬ ಭಾವನೆಯನ್ನು ಮೂಡಿಸುತ್ತದೆ.

ಮನೆಕಟ್ಟುವಲ್ಲಿ ಬೇಕಾಗುವ ಪದಾರ್ಥಗಳ ಬಗೆಗೆ ಕಾವೇರಿಗಿದ್ದ ತಿಳುವಳಿಕೆ ನೋಡಿ ಕೆಲಸಗಾರರೆ ಆಶ್ಚರ್ಯ ಪಡುತ್ತಿದ್ದರು, ತನ್ನ ಮನೆಯ ಒಳಗೆ ಆಧುನಿಕ ವಸ್ತುಗಳನ್ನು ತರುವಲ್ಲಿ ಅದನ್ನು ಶೃಂಗರಿಸುವಲ್ಲಿ ತಾಳುವ ಆಸಕ್ತಿ ಶ್ರಮ ಎಂತಹವರನ್ನು ಬೆರಗುಗೊಳಿಸುತ್ತಿತ್ತು.

ತನ್ನ ಮನೆಯನ್ನು ಕಟ್ಟಲು ಮೈಸೂರು ನಗರದ ಪ್ರತಿಯೊಂದು ಕಟ್ಟಡಗಳನ್ನು ವೀಕ್ಷಿಸುತ್ತಿದ್ದಳು, ಒಳಸಿಂಗಾರಕ್ಕೆ ಅಮೆರಿಕಾ, ಇಂಗ್ಲೇಂಡಿನಿಂದ ಮಾಸ ಪತ್ರಿಕೆಗಳನ್ನು ತರಿಸಿ ಮನೆಯನ್ನು ಹೇಗೆ ಅಲಂಕರಿಸುವುದೆಂದು ತಿಳಿಯುತ್ತಿದ್ದಳು.

ಇಷ್ಟೆಲ್ಲಾ ಜಾಣ್ಮೆ, ತಾಳ್ಮೆ ಪ್ರತಿ ಕೆಲಸದಲ್ಲೂ ಆಸಕ್ತಿಯಿದ್ದ ಕಾವೇರಿ ಮಾನಸಿಕ ಅಸ್ವಾಸ್ಥ್ಯಕ್ಕೆ ಒಳಗಾಗಿ ಎಲ್ಲರಿಂದಲೂ ದೂರವಾಗುತ್ತಾಳೆ, ತನ್ನ ಮಕ್ಕಳೇ ಅವಳ ರೀತಿಗೆ ಒಗೋಡದೆ ಇದ್ದಾಗ ಅವಳಲ್ಲಿ ಎಳುವ ಪ್ರೇಮ ಉದ್ವೇಗದ ಅಲೆಗಳು ಅವಳನ್ನು ಮತ್ತೆ ಕೆರಲುವಮತೆ ಮಾಡಿತ್ತವೆ, ಸತೀಶನು ಅವಳ ಒಲವಿಗೆ ಸಹಕರಿಸದೆ ನಿರಾಕರಸಿ ಬೇರೊಮದು ಹೆನ್ಣನ್ನು ಬಯಸಿದಾಗ ಅವಳಲ್ಲಿ ಭರವಸೆಯ ಕೊಂಡಿ ಕಳಚಿ ಬೀಳುತ್ತದೆ, ಈ ಸಂದರ್ಭದಲ್ಲಿ ನಡೆಯುವ ಸಂಭಾಷಣೆಯನ್ನು ಸೊಗಸಾಗಿ ಚಿತ್ರಿಸಿದ್ದಾರೆ,

ಪೌರ್ಣಮಿಯ ದಿನ ಅವಳಲ್ಲಾಗುವ ಉನ್ಮಾದಕತೆ ಅವಳು ವರ್ತಿಸುವ ರೀತಿ, ಅವಳು ಒಬ್ಬ ಮನಸಿಕ ಅಸ್ವಸ್ಥೆಯಲ್ಲಿರುವ ಸ್ತ್ರೀ ಎಂದು ಸ್ಪಷ್ಟತೆ ಮೂಡಿಸುವಲ್ಲಿ ಎರೆಡು ಮಾತಿಲ್ಲ ಈ ಕಾದಂಬರಿಯ ಮೂಲಕ ಸಮಾಜಕ್ಕೆ ನೀಡುವ ಸಂದೇಶ ಸಮಾಜದ ಕಾಳಜಿಯನ್ನು ಸೂಚಿಸುತ್ತದೆ.

## ಅಧ್ಯಾಯ - ೮

### ತ್ರಿವೇಣಿ ಕೃತಿಗಳ ಹೊಳಹುಗಳು

ಒಂದು ಯಶಸ್ವೀ ಮನೋವೈಜ್ಞಾನಿಕ ಕಾದಂಬರಿಯ ಮಾನದಂಡಗಳು ಪ್ರಮುಖವಾಗಿ ಎರಡು. ಒಂದು ಕೃತಿಯು ಮನಶ್ಶಾಸ್ತ್ರದ ಅಂಶಗಳಿಂದ ಕೂಡಿದ್ದು ಮನಶ್ಶಾಸ್ತ್ರ ತತ್ವಗಳಿಗೆ ಒಳಗಾಗಿರಬೇಕು. ಎರಡು ಕೇವಲ 'ಕೇಸ್ ಹಿಸ್ಟರಿ'ಯಾಗಬಾರದು ಅನೇಕ ಕಾದಂಬರಿಗಳು, ಮನೋವೈಜ್ಞಾನಿಕ ಅಂಶಗಳನ್ನು ಒಳಗೊಂಡಿದ್ದು ಆದರೆ ಈ ಅಂಶಗಳ ಮಾನದಂಡಗಳಲ್ಲಿ ಸೋಲುತ್ತದೆ. ಆದರೆ

ಬಾಲ್ಯದಲ್ಲಿ ಬೆಳೆಯುವ ಮಗುವಿನ ಮನಸ್ಸಿನ ಮೇಲೆ ಸಂಸಾರದಲ್ಲಾಗುವ ಬದಲಾವಣೆಗಳು ಹೇಗೆ ಪರಿಣಾಮ ಬೀರುತ್ತವೆ ಎಂಬ ಅಂಶವನ್ನು 'ಬೆಕ್ಕಿನ ಕಣ್ಣು' ಕಾದಂಬರಿಯಲ್ಲಿ ಬಹಳ ಸರಳವಾಗಿ ಗೊಂದಲಕ್ಕೆ ಅವಕಾಶವಿಲ್ಲದಂತೆ, ಬೇಸರ ಉಂಟಾಗದಂತೆ ತುಂಬಾ ಚಾತುರ್ಯದಿಂದ ಚಿತ್ರಿಸಿರುವ ಲೇಖಕಿಯ ಪ್ರತಿಭೆಯು ಇಲ್ಲಿ ಸ್ಪಷ್ಟವಾಗಿ ಬೆಳಕು ಕಂಡಿದೆ.

ಕಾದಂಬರಿಯ ಕೆಂದ್ರ ಪಾತ್ರವಾದ ಕುಸುಮಳ ಮುಗ್ಧಮನಸ್ಸನ್ನರಿಯದೆ ಅವಳನ್ನು ನಿಷ್ಕಾರಣವಾಗಿ ದಂಡಿಸುವ ಪದ್ಮಳ ವರ್ತನೆ ಇವಳ ಬಾಹ್ಯರೂಪ ಹಾಗೂ ಆಂತರ್ಯದ ವಂಚನೆಯ ಪ್ರತೀಕಾವಾಗಿ ಕುಸುಮಳು 'ಪಾಲಿ' ಯನ್ನು ನೋಡುವ ಸನ್ನಿವೇಶ ಎಲ್ಲವೂ ಸಹಜವಾಗಿ ಚಿತ್ರಿಸಲಾಗಿದೆ.

ಆದರೆ ಕೆಲವು ಸನ್ನಿವೇಶಗಳ ನಿರೂಪಣೆಯಲ್ಲಿ ಕೆಲವೊಂದು ಅಸಹಜತೆಯನ್ನು ಕಾಣಬಹುದಾಗಿದೆ. ಆಗಲೇ ಹದಿನಾರರ ಪ್ರಾಯದ ಕುಸುಮ ಬೆಕ್ಕನ್ನು ಓಡಿಸಿಕೊಂಡು ಬೀದಿ ಬೀದಿಗಳಲ್ಲಿ ಓಡುವುದು. ಬೆಕ್ಕು ಇವಳಿಂದ ತಪ್ಪಿಸಿಕೊಳ್ಳುವುದು, ಓಡಿಸಿಕೊಂಡು ಅದನ್ನೇ ಬೀದಿ ಬೀದಿಗಳಲ್ಲಿ ಓಡಾಡುವುದು, ಬೆಕ್ಕ ಅವಳಿಗೆ ಸಿಕ್ಕದೆ ಓಡುವುದು ಅನೇಕ ಸಲ ಅವಳ ಕೈಗೆ ಸಿಕ್ಕಿ ಒದೆ ತಿಂದರೂ ಅದು ಸಾಯದೆ ಉಳಿಯುವುದು. ಬೆಕ್ಕನ್ನು ಹುಡುಕಿಕೊಂಡು ತುಂಬಾ ದೂರ ಹೋಗುವುದು ಇವೆಲ್ಲಾ ಅಸಹಲವೆಂಬಂತೆ ಕಂಡುಬರುತ್ತದೆ.

ಮನಶ್ಶಾಸ್ತ್ರದ ಕಥಾವಸ್ತುವುಳ್ಳ ಕಾದಂಬರಿಯಾದ್ದರಿಂದ ಪದ್ಮಳ ತಮ್ಮ ರಾಜಶೇಖರನೇ ಮನಶ್ಶಾಸ್ತ್ರದ ಶಿಕ್ಷಣವನ್ನು ಪಡೆಯದಿರುವುದು ಕಾದಂಬರಿಯಲ್ಲಿ ಬಲವಂವಾಗಿ ಮಾಡಿರುವ ಮಾರ್ಪಾಡು ಎಂಬಂತೆ ಗೋವರವಾಗುತ್ತದೆ. ಆದರೆ ರಾಜಶೇಖರನ ಸಮಯೋಚಿತ ಬುದ್ಧಿವಂತಿಕೆ, ಕುಸುಮಳ ಮೇಲಿನ ಅನುರಾಗವೇ ಕುಸುಮಳ ಮನೋವೈಕಲ್ಯಕ್ಕೆ ಔಷಧವಾಗಿ ವರ್ತಿಸಿರುವ ಚಿತ್ರಣವು ಸೊಗಸಾಗಿ ಮೂಡಿಬಂದಿದೆ.

ಇವರ ಎರಡನೇ ಮನೋವೈಜ್ಞಾನಿಕ ಕಾದಂಬರಿ 'ದೂರದ ಬೆಟ್ಟ' ವಿವಾಹವಾದ ತರುಣದಲ್ಲೇ ಪತಿಯನ್ನು ಕಳೆದುಕೊಂಡು ವಿಧವೆ ಅನಿಭವಿಸುತ್ತಿದ್ದ ಸುನಂದ ತಂದೆ ತಾಯಿ ಅಣ್ಣನ ಆಸೆಯಂತೆ ವಿವಾಹಕ್ಕೆ ಒಪ್ಪುತ್ತಾಳೆ. ಪುನರ್ವಿಹಕ್ಕಾಗಿ ಸುನಂದಳನ್ನೇ ಒಪ್ಪಿಸಲು ಅವಳ

ತಾಯಿ,ಅಣ್ಣ,ಅತ್ತಿಗೆ ಅವಳನ್ನು ಶ್ರೀಧರರೊಡನೆ ಏಕಾಂತದಲ್ಲಿರಲು ಅವಕಾಶ ಕಲ್ಪಿಸಿಕೊಡುವುದು ಅಸಹಜ ಎಂಬಂತೆ ತೋರುತ್ತದೆ.
ಇಲ್ಲಿ ಸುನಂದಳೇ ತನ್ನ ಮನಸಿಕ ಖಾಯಿಲೆ ಬಗೆಗೆ ಅರಿಯುವುದು ಹಾಗೂ ಅದಕ್ಕಾಗಿ ಮನಸ್ಯಾಸ್ತ್ರರ ವೈದ್ಯರ ಬಳಿ ಸಲಹೆ ಪಡೆಯಲು ಹೋಗುವುದು ಅವಳೆ ನಿರ್ಧರಿಸುವುದು ಇನ್ನು ಅಸಹಜವೆಂಬಂತೆ ಚಿತ್ರಿತವಾಗಿದೆ.

ಕೃತಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸುನಂದೆಯು ಅಭ್ಯಾಸ ಮಾಡಿದ್ದು ಅರ್ಥಶಾಸ್ತ್ರ ಹಾಗೂ 'ರಾಜ್ಯಶಾಸ್ತ್ರ'ಗಳನ್ನು ಮಾತ್ರ, ಆದರೆ ಮನಶಾಸ್ತ್ರದ ವಿಚಾರವಾಗಿ ತಿಳಿದು ಮನಶ್ಯಾಸ್ತ್ರಜ್ಞರ ಸಲಹೆ ಪಡೆಯುವಂತೆ ಇಲ್ಲಿ ಲೇಖಕಿಯೇ ಉದ್ದೇಶ ಪೂರ್ವಕವಾಗಿ ಮನಶಾಸ್ತ್ರದ ಪರಿಣಿತಿಯಿಂದಾಗಿಯೇ ಕಥಾನಾಯಕಿಗೆ ಈ ರೀತಿಯ ಸಾಮರ್ಥ್ಯ ಉಂಟಾಗಿ ತಜ್ಞರ ಸಲಹೆ ಪಡೆದಳೋ ಏನೋ!

ಸುನಂದಳನ್ನು ವಿವಾಹಕ್ಕೆ ಒಪ್ಪಿಸಲು ಶ್ರೀಧರನೊಡನೆ ಸಲಹೆಯಿಂದಿರಲು ಬಿಟ್ಟಂತಹ ಸಂಧರ್ಭದಲ್ಲಿ ವಿದ್ಯಾವಂತ ಮಗಳ ಬಗೆಗೆ ಮನೆಯಲ್ಲಿ ಎಲ್ಲರಿಗೂ ನಂಬಿಕೆ ಇತ್ತು . ಅವಳ ತಪ್ಪು ಮಾಡುವುದಿಲ್ಲ ಎಂಬ ಭರವಸೆ ಇತ್ತು ಮುಂತಾಗಿ ಸೂಚಿಸಿದ ಮಾತ್ರಕ್ಕೆ ಅಸಹಜತೆಯನ್ನು ಮುಚ್ಚಿದಂತಾಗುವುದುಲ್ಲಿ, ಅಲ್ಲದೆ 'ವಿದ್ಯಾವಂತ'ಳಾದ ಮಗಳ ಬಗೆಗೆ ಮನೆಯಲ್ಲಿ ಎಲ್ಲರಿಗೂ ನಂಬಿಕೆ ಇತ್ತು ಎಂಬ ಹೇಳಿಕೆಯನ್ನು ಗಮನಿಸಿದಾಗ 'ವಿದ್ಯಾವಂತ ತರುಣಿಯರು ನೀತಿಗೆಟ್ಟು ನಡತೆಗೆ ಕಾಲಿಡುವುದಿಲ್ಲ ಎಂಬ ಅರ್ಥವೂ ಅದರಲ್ಲಿ ಕಾಣಿಸುತ್ತದೆ. ಇವರ ಮಾತಿನ ಅರ್ಥವೂ ಅವಿದ್ಯಾವಂತರು ಮಾತ್ರ ಅನೀತಿಯ ಜೀವನ ನಡೆಸುತ್ತಾರೆ. ವಿದ್ಯಾವಂರೆಲ್ಲರೂ ಯೋಗ್ಯರು ಎಂದು ತೀರ್ಮಾನಿಸಿದಂತಾಯಿತು. ಇಲ್ಲಿ ಲೇಖಕಿಯು ಏಕಪಕ್ಷಿಯಾಗಿ ನೋಡುವುದು ಯಾರೂ ಒಪ್ಪುವುದಿಲ್ಲ ಹಾಗೂ ಸಾಧುವೂ ಅಲ್ಲ ಎಂಬಂತೆ ತೋರುತ್ತದೆ.

ಸುನಂದೆಯು ವೈದ್ಯರ ಬಳಿ ತಾನೇ ನಿರ್ಧರಿಸಿ ಯಾರ ಸಲಹೆ ಪಡೆಯದೆ ಹೋಗಿ ತನ್ನ ಸಮಸ್ಯೆಯನ್ನು ಮುಂದಿಡುತ್ತಾಳೆ. ತನ್ನೆಲ್ಲಾ ವೈಯಕ್ತಿಕ ವಿಚಾರಗಳನ್ನು ಸುನಂದಾ ಹೇಳಿ ತನಗೆ ಈಗಾಗಲೇ ವಿವಾಹವಾಗಿ ಪತಿಯನ್ನು ಕಳೆದುಕೊಂಡು ವಿಧವೆ ಎಂಬುದರ ಬಗೆಗೆ ಮೊದಲಿಗೆ ಹೇಳುವುದಿಲ್ಲ, ಮೊದಲಿಗೆ ಹೇಳಿದ್ದರೆ ಸುನಂದೆಯ ಸಮಸ್ಯೆ ಪರೀಕ್ಷಿಸಲು ಹೆಚ್ಚು ಕಾಲಬೇಕಾದಂತೆ ತೋರುತ್ತಿರಲಿಲ್ಲ.

ವೈದ್ಯರಲ್ಲಿ, ವಕೀಲರಲ್ಲಿ ಯಾವ ಸತ್ಯವನ್ನು ಮುಚ್ಚಿಡಬಾರದೆಂಬ ವಿಷಯ ತಿಳಿದಿದ್ದರೂ, ಸುನಂದೆಳೇ ಈ ವಿಚಾರದಲ್ಲಿ ಪ್ರಮುಖ ಆಸಕ್ತಿ ತಳಿದು ಹೋಗಿದ್ದರಿಂದ ವೈದ್ಯರಲ್ಲಿ ತನ್ನ ಮೊದಲಿನ ವಿವಾಹದ ಬಗೆ ಕೊನೆಯಲ್ಲಿ ತಿಳಿಸುವುದು ಅಸಹಜವೇ ಎಂದೇನಿಸುತ್ತದೆ.
ಲೇಖಕಿಯ ಸುನಂದಾಳ ಸುತ್ತ ಹೆಣೆದ ಈ ಕೃತಿಯಲ್ಲಿ ಶ್ರೀಧರನು ಕೂಡ ಪ್ರಮುಖ ಪಾತ್ರವಾಗಿರುತ್ತಾನೆ. ಆದರೆ ಕೃತಿಯಯಾವ ಭಾಗದಲ್ಲೂ ಶ್ರೀಧರ ಒಬ್ಬ ವಕೀಲ ಸೀತಾರಾಮುವಿನ ಗೆಳೆಯ ಎಂಬುದನ್ನು ಬಿಟ್ಟು ಬೇರೆ ಯಾವ ಮಾಹಿತಿಯು ಶ್ರೀಧರನ ಬಗೆಗೆ ತಿಳಿಸುವುದೆ ಇಲ್ಲಾದರೂ ಅವನೊಡನೆ ವಿವಾಹ ನೆರವೇರಿಸಲು ಎಲ್ಲರೂ ಸಮ್ಮತಿಸಿರುವುಸು ಒಂದು

ಕೃತಕವೇನೋ ಎಂಬಂತೆ ಬಾಸವಾಗಿದೆ. ಹೀಗೆ ಅನೇಕ ನ್ಯೂನತೆಗಳಿದ್ದರೂ ಉಳಿದ ವಿಷಯದಲ್ಲಿ ಸುಂದರವಾದ ಚಿತ್ರಣವನ್ನು ಮನಸ್ಸಿನಲ್ಲಿ ನಿಲ್ಲಸುತ್ತವೆ.

"'ಮುಚ್ಚಿದ ಬಾಗಿಲು' ಕಾದಂಬರಿಯಲ್ಲಿ ಮನೋವೈದ್ಯನ ಸುತ್ತ ಎಣೆದಿರುವ ಕಥೆಯಾಗಿದ್ದು ಅದರೊಡನೆ ಆಸ್ಪತ್ರೆಯ ಚಿತ್ರಣವನ್ನು ನಿಮಗೆ ನೀಡಿದ್ದಾರೆ, ಕೇವಲ ರೋಗ ದಾಖಲೆಗಳೇ ತುಂಬಿರುವ ಈ ಕಾದಂಬರಿಯು 'case History' ಯ ರೂಪದಲ್ಲೇ ಬೆಳದಿರುವುದನ್ನು ಕಾಣಬಹುದು.ಅನೇಕ ರೋಗಿಗಳ ವಿಚಾರವಾಗಿ ವಿಷಯಗಳನ್ನು ನಿರೂಪಿಸಿದ್ದಾರೆ,"[೧]

ವೈದ್ಯನ ಎದುರಿನಲ್ಲೇ ಸೋಮಶೇಖರ ಹಾಗೂ ಗಿರಿಜ ಮೈಮರೆಯುವಂತೆ ಸಂಭಾಷಣೆ ನಡೆಸಿಸರೆಂಬ ನಿರೂಪಣೆಯು ತೀರ ಬಾಲಿಕ ಕಲ್ಪನೆ ಎನ್ನುವಂತಯೇ ಭಾಸವಾಗಿದೆ.(ಪುಟ ೧೪೦-೧೪೧)

ತಾರಾಳ ರೋಗದ ಮೂಲವನ್ನು ಹುಡುಕುವ ಸನ್ನಿವೇಶದಲ್ಲಿ ವೈದ್ಯನು ಅವಳನ್ನು ಬಸವನ ಗುಡಿಯಿಂದ ಮಾನಸಿಕ ಆಸ್ಪತ್ರೆಗೆ ಏಕಾಂಗಿಯಾಗಿ ಕಳುಹಿಸುವಂತೆ ಸೂಚಿಸಿದರು ಎಂಬುದು ಈ ಸನ್ನಿವೇಶದಲ್ಲಿ ಮಾನಸಿಕ ಸ್ವಾಸ್ಥ್ಯವಿಲ್ಲದ ವ್ಯಕ್ತಿ-ಅದೂ ಪ್ರಾಯದ ಹುಡುಗಿ ಸಂಜೆ ಐದು ಗಂಟೆಯ ಮೇಲೇ ಏಂಕಾಂಗಿಯಾಗಿ ಹೋಗುವಳೇ? ಇವೆಲ್ಲವೂ ಅಸಹಜ ಎಂಬಂತೆ ತೋರುತ್ತದೆ.

ತಾರಾಳ ಪ್ರಕರಣದಲ್ಲಿ ವೈದ್ಯರು 'ಸೈಕೋ ಡ್ರಾಮ ಟೆಸ್ಟ್'ನ ಬಗ್ಗೆ ಪ್ರಸ್ತಾಪಿಸಿ ಪ್ರಯೋಗವನ್ನು ವಿವರಿಸಿದ್ದಾರೆ. ಈಗಾಗಲೇ ವ್ಯಕ್ತಿಯೊಬ್ಬನಿಂದ ಬಲವಂತವಾಗಿ ಚುಂಬಿನಕ್ಕೊಳಗಾಗಿ ತಾನು ಅಪವಿತ್ರಳೆಂದು ಮಾನಸಿಕ ವೈಕಲ್ಪಕ್ಕೆ ಒಳಗಾಗಿರುವ ತಾರಾ ಮಾತು ಮಾತಿಗೆ "ಐ ಲವ್ ಯು' ಎನ್ನುತ್ತಾ ತಾರಾಳ ಹಿಂದೆ ಬರುತ್ತಿದ್ದ ವೆಂಕಟೇಶನೊಡನೆ ಪರಿಚಯವಿರುವಂತೆ ಮಾತನಾಡಿದಳು ಎಂಬ ನಿರೂಪಣೆಯು ಅಸಮರ್ಪಕವೆಂಬಂತೆ ತೋರುತ್ತದೆ.

ಮಾನಸಿಕ ಆಸ್ಪತ್ರೆಯ ವೈದ್ಯನು ತನ್ನ ವೈದ್ಯ ವೃತ್ತಿಯಲ್ಲಿ ಎಷ್ಟೋ ವಿಧದ ರೋಗಿಗಳನ್ನು ನೋಡಿರುತ್ತಾರೆ, ಅವರು ರೋಗಿಗಳ ವಿಷಯದಲ್ಲಿ ತಳೆಯುವ ಭಾವನೆಗೂ ಸಾಮಾನ್ಯ ವ್ಯಕ್ತಿಯು ರೋಗಿಯ ಬಗೆಗೆ ತಳೆಯುವ ಭಾವನೆಗೂ ವ್ಯತ್ಯಾಸವಿದೆ. ಆದರೆ ಇಲ್ಲಿ ಡಾಕ್ಟರ್ ಜಯರಾಮುವಿನ ರೋಗಿಯಾಗಿ ಬರುವ ಸೋಮಶೇಖರನು ಅಳುವ ಸಂಧರ್ಭದಲ್ಲಿ ಮನಸ್ಸು ತನ್ನ ಮಗಳನ್ನು ನೆನನೆಯುವುದು ಸೋಮಶೇಖರನ ಬಗೆಗೆ ಮರುಕ ವ್ಯಕ್ತಪಡಿಸುವುದು ಈ ಸನ್ನಿವೇಶಗಳು ಒಬ್ಬ ವೈದ್ಯನ ಚಿತ್ರಣವನ್ನು ಚಿತ್ರಿಸುವಲ್ಲಿ ಸೋತರೆನೊ ಎಂಬಂತೆ ತೋರುತ್ತದೆ.

ಈ ಕಾದಂಬರಿಯು ವೈದ್ಯನ ದಿನಚರಿಯೇ ಎಂಬಂತೆ ನಿರೂಪಿತವಾಗಿದೆ ಎಂಬ ಅಭಿಪ್ರಾಯವನ್ನು ಸಮರ್ಥಿಸುತ್ತದೆ.

ಒಬ್ಬ ವ್ಯಕ್ತಿಯ ಮಾನಸಿಕ ಸ್ಥಿತಿಗಳ ಮೇಲೆ ಅವನ ಅಥವಾ ಅವಳ ಪರಿಸರದವರ ನಡತೆ ಹಾಗೂ ಪ್ರತಿಕ್ರಿಯೆಗಳು ಹೇಗೆ ಪರಿಣಾಮ ಬೀರುತ್ತವೆ ಎಂಬ ಅಂಶವನ್ನು ಮನೋವಿಜ್ಞಾನದ ಹಿನ್ನೆಲೆಯಲ್ಲಿ ಲೇಖಕಿಯು 'ಶರಪಂಜರ' ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಅತ್ಯಂತ ಜನಪ್ರಿಯತೆ

ಗಳಿಸಿದ ಈ ಕಾದಂಬರಿಯು ಓದುಗರನ್ನು ಒಂದು ಗೊಂದಲವನ್ನು ಮೂಡಿಸುವುದಂತೂ ಖಂಡಿತ.

"ಈ ಕಾದಂಬರಿಯಲ್ಲಿ ಕಾವೇರಿಯು ವಿವಾಹ ಪೂರ್ವ ತಪ್ಪನ್ನು ಎಲ್ಲೂ ನೇರಯವಾಗಿ ಲೇಖಕಿ ನಿರೂಪಿಸುವುದಿಲ್ಲ, ಕೃತಿಯಲ್ಲಿ ಅಲ್ಲಲ್ಲಿ ಬರುವ ಸೂಚನೆಗಳಿಂದ ಮಾತ್ರ ಓದುಗರು ನಡೆದಿರಬಹುದಾದ್ದನ್ನು ಊಹಿಸಬೇಕಾಗುತ್ತದೆ."[೨] ಈ ಗೊಂದಲದಿಂದ ಕಾವೇರಿ ನದಿಯ ತೀರದಲ್ಲಿ ಏನನ್ನೂ ಕಳೆದುಕೊಂಡು ಅದನ್ನು ಹುಡುಕಲು ಕಾವೇರಿ ನಡೆಸುವ ಪ್ರಯತ್ನ ಯಾವುದೋ ದೆವ್ವ ಭೂತದ ಸನ್ನಿವೇಶವೆನೊ ಎಂಬಂತೆ ಭಾಸವಾಗುತ್ತದೆ, ಏನನ್ನೊ ಕಳೆದುಕೊಂಡು ಅದನ್ನು ಹುಡುಕಲು ಕಾವೇರಿ ನಡೆಸುವ ಪ್ರಯತ್ನ; 'ವೇನಿ, ವೇದಿ, ವೀಚಿ' ಎಂಬ ಶಬ್ದಗಳ ಅರ್ಥವನ್ನು ವಿವರಿಸಿದೆ ಅವುಗಳನ್ನು ಪುನಾರಾವರ್ತಿಸುವುದು ಓದುಗರಲ್ಲಿ ಅತೃಪ್ತಿಯನ್ನು ತರುತ್ತದೆ.

ಕಾವೇರಿಗೆ ತನ್ನ ಗಂಡನ ಮೇಲಿದ್ದ ಒಲವು, ಆಸ್ಪತ್ರೆಯಿಂದ ಮರಳಿದಾಗ ಅವನು ಕಾವೇರಿಯೊಡನೆ ನಿರಾಸಕ್ತಿ ಹೊಂದಿ ದೈಹಿಕ ಸಂಪರ್ಕವನ್ನು ನಿರಾಕರಿಸಿದಾಗ ಕಾವೇರಿ ಅನುಭವಿಸುವ ಅವಮಾನ ಮತ್ತು ಅವಳ ಮನಸ್ಸಿನ ತುಮುಲ ಇವನ್ನು ಈ ತಂತ್ರವು ಸಫಲವಾಗಿ ಅಭಿವ್ಯಕ್ತಿಗೊಳಿಸಿದೆ.

ತ್ರಿವೇಣಿಯವರು ಹೊಸಗನ್ನಡದ ಕಾದಂಬರಿ ಪ್ರಕಾರದಲ್ಲಿ ಹೆಚ್ಚು ಉತ್ಸಾಹದಿಂದ ಕಾಲಿರಿಸಿದ ಲೇಖಕಿಯೆಂದು ಪರಿಗಣಿಸಬಹುದು ಕನ್ನಡ ಮಹಿಳಾ ಸಾಹಿತಿಗಳ ಪೈಕಿ ತ್ರಿವೇಣಿಯವರು ಮನೋವೈಜ್ಞಾನಿಕಕ್ಕೆ ಸಂಬಂಧಿಸಿದ ಕೆಲವೊಂದು ಕಾದಂಬರಿಗಳನ್ನು ನೀಡಿದ ನಂತರ ಅನೇಕ ಲೇಖಕಿಯರು ಮನೋರೋಗ ಹಾಗೂ ಅಂಗಹೀನತೆ ಮುಂತಾದ ಇನ್ನಿತರ ಕಾಯಿಲೆಯ ಬಗ್ಗೆ ಹಲವಾರು ಕಾದಂಬರಿಗಳನ್ನು ರಚಿಸಿದರು. ಹೊಸ ಸಾಹಿತ್ಯ ಸೃಷ್ಟಿಗೆ ತ್ರಿವೇಣಿಯವರು ಒಂದು ಸುಗಮ ಮರ್ಗವನ್ನು ಹಾಕಿಕೊಟ್ಟರು ಎಂದರೆ ತಪ್ಪಾಗಲಾರದು.

ಅಡಿ ಟಿಪ್ಪಣಿ

೧. 'ತ್ರಿವೇಣಿ'– ಭಾಗ್ಯ ಜಯಸೂರ್ಯ, ಅನನ್ಯ ಮಹಿಳಾ ಚೇತನ ಮಾಲಿಕೆ
೨. ಯಶೋಧರ, ಎಚ್.ಬಿ 'ತ್ರಿವೇಣಿ ಕಾದಂಬರಿ ಸಮೀಕ್ಷೆ'

ಅಧ್ಯಾಯ – ೯

## ಮುಕ್ತಾಯ

ಕನ್ನಡ ಕಾದಂಬರಿಯ ಪ್ರಪಂಚಕ್ಕೆ ತ್ರಿವೇಣಿಯವರು ನೂತನ ಅನುಭವಗಳನ್ನು ನೂತನ ಭಾವನಾ ಕ್ರಮಗಳನ್ನು ಪರಿಚಯಿಸಿದರು. ಇವರು ಕನ್ನಡ ಸಾಹಿತ್ಯದ ಪ್ರಥಮ ಲೇಖಕಿಯಲ್ಲದಿದ್ದರೂ ಅಪಾರ ಓದುಗ ವೃಂದವನ್ನು ಪಡೆದಿದ್ದ ಪ್ರಥಮ ಲೇಖಕಿ ತಮ್ಮ ಸರಳ ಹಾಗೂ ನೇರ ನಿರೂಪಣೆಯಿಂದ ಅವರು ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯಾಗಿ ಬದುಕುವುದೆಂದರೆ ಏನೆಂದು ಓದುಗರಿಗೆ ಮನದಟ್ಟು ಮಾಡಿದರು.

ಇವರ ಎಲ್ಲಾ ಕೃತಿಯಲ್ಲೂ ಪತ್ನಿಯಾಗಿ ಪ್ರೇಮಿಯಾಗಿ ಗರ್ಭಿಣಿಯಾಗಿ, ಬಾಲ್ಯವಿಧವೆಯಾಗಿ ಎಲ್ಲಾ ಸ್ತ್ರೀಯು ಅನುಭವಿಸುವ ಅಪೇಕ್ಷೆಗಳನ್ನು, ಆಸೆ–ನಿರಾಸೆಗಳನ್ನು ಮತ್ತು ನೋವು ನಲಿವುಗಳನ್ನು ಮುಕ್ತವಾಗಿ ದಾಖಲಿಸಿದ್ದಾರೆ. ಕಿಶೋರ ಪ್ರೇಮವನ್ನು ಚಿತ್ರಿಸುವುದರಲ್ಲಿ ತ್ರಿವೇಣಿ ಅಪ್ರತಿಮರು. ಆಳವಾದ ಅರಿವಿನಿಂದ ಮತ್ತು ಮುಖ್ಯವಾಗಿ ನವಿರಾದ ಹಾಸ್ಯದಿಂದ ಯುವ ಪ್ರೇಮಿಗಳ ಪ್ರಣಯಕಾಲದ ಭಯ–ಭೀತಿಗಳನ್ನು ಮತ್ತು ಪ್ರೇಮವು ಯಶಸ್ವಿಯಾದಾಗ ಅವರ ಆನಂದ–ಹಿಗ್ಗುಗಳನ್ನು ಮತ್ತೆ ಮತ್ತೆ ನಮ್ಮ ಕಾದಂಬರಿಗಳಲ್ಲಿ ಓದುಗರ ಮನಸ್ಸಿನಲ್ಲಿ ಯಾವಗಲೂ ಹಸಿರಾಗುಳಿಯುವ ದೃಶ್ಯಗಳೆಂದರೆ ಯುವ ಪ್ರೇಮಿಗಳ ಪ್ರಣಯ ದೃಶ್ಯಗಳು.

ಕನ್ನಡ ಮಹಿಳೆಯರಲ್ಲೇ ಸಾಹಿತಿಗಳಲ್ಲೇ ತ್ರಿವೇಣಿಯವರು ಮೊದಲ ಬಾರಿಗೆ ಮನೋವೈಜ್ಞಾನಿಕ ಕಾದಂಬರಿಗಳನ್ನು ಮನೋವೈಕಲ್ಯಕ್ಕೆ ಒಳಗಾದವರ ಬಗ್ಗೆಯೇ ಬರೆದ ಕಾದಂಬರಿಗಳನ್ನು, ಕನ್ನಡ ಓದುಗರಿಗೆ ಪರಿಚಯಿಸಿದರು. ಮನೋವಿಜ್ಞಾನವನ್ನು ಕುರಿತ ನಾಲ್ಕು ಕಾದಂಬರಿಗಳಲ್ಲಿ ಹಾಗೂ ಅನೇಕ ಕತೆಗಳ ಮೂಲಕ ಅಲ್ಲಿಯವರೆವಿಗೂ ಅಜ್ಞಾತವಾಗಿದ್ದ ಒಂದು ಹೊಸ ಲೋಕವನ್ನು ಓದುಗರ ಮುಂದಿಟ್ಟರು. ಸಮಾಜದಲ್ಲಿ ಮಾನಸಿಕ ಆಸ್ಪತ್ರೆ ಹಾಗೂ ಅಲ್ಲಿರುವ ರೋಗಿಗಳ ಬಗೆಗಿರುವ ತಪ್ಪು ಕಲ್ಪನೆಯನ್ನು ಮೌಢ್ಯವನ್ನು ತಮ್ಮ ಕಾದಂಬರಿಗಳ ಮೂಲಕ ಹೋಗಲಾಡಿಸಲು ಪ್ರಯತ್ನಿಸಿದ್ದಾರೆ. ಅಲ್ಲದೆ ಮಾನಸಿಕ ಅಸ್ವಸ್ಥರ ಬಗೆಗೆ ಅನುಕಂಪ ಪ್ರೀತಿಯಿಂದ ಕಂಡು ಅವರು ಗುಣಮುಖರಾಗಲು ಸಹಾಯ ಮಾಡುವಂತೆ ಸಮಾಜಕ್ಕೆ ಸಂದೇಶವನ್ನು ನೀಡಿದ್ದಾರೆ. ಮಾನಸಿಕವಾಗಿ 'ಸ್ವಸ್ಥರು'. 'ಅಸ್ವಸ್ಥರು' ಎಂದು ಗುರುತಿಸುವವರ ಮಧ್ಯೆ ಅಂತಹ ಮಹದಂತರವೇನೂ ಇಲ್ಲವೆಂದು ಓದುಗರಿಗೆ ಮನದಟ್ಟು ಮಾಡಿಸಿದರು.

ಮಾನಸಿಕ ಚಿಕಿತ್ಸಾಲಯಗಳಲ್ಲಿ ಬಂದಿಯಾಗಿರುವ ಇಂತಹ ದುರ್ದೈವಿಗಳಿಗಾಗಿ ಜನರು ಮರುಗುವಂತೆ ಮತ್ತು ಯೋಜಿಸುವಂತೆ ಮಾಡಿದುದು ಯಾವ ಲೇಖಕನೂ ಲೇಖಕಿಯೂ ಅಭಿಮಾನ ಪಡಬಹುದಾದಂತಹ ಸಾಧನೆ.

ಸಾಹಿತ್ಯ ಲೋಕದಲ್ಲಿ ಮಹಿಳೆಯರು ಅತ್ಯಲ್ಪವಾಗಿದ್ದ ಕಾಲದಲ್ಲಿ ತ್ರಿವೇಣಿಯವರು ತಮ್ಮ ಸಾಹಿತ್ಯ ಸೃಷ್ಟಿಯನ್ನು ಪ್ರಾರಂಭಿಸಿದರು. ಅಂದು ಲೇಖಕರು ವಿಮರ್ಶಕರು ಮತ್ತು ಓದುಗರು ಎಲ್ಲರೂ ಲೇಖಕಿಯರನ್ನು ಮತ್ತು ಅವರ ಸಾಹಿತ್ಯವನ್ನೇ ನಿಕೃಷ್ಟವಾಗಿ ಕಾಣುವ ಕಾಲವಾಗಿತ್ತು.

ಹೊರಗಿನವರಷ್ಟೆ ಅಲ್ಲದೇ ಮನೆಯಲ್ಲಿಯೂ ಕೂಡ ನಿಂದನೆ ಅಪಹಾಸ್ಯಗಳಿಗೆ ಒಳಗಾಗುತ್ತಿದ್ದರು. ತ್ರಿವೇಣಿಯವರ ಸಹೋದರನೆ 'ನೀನು ಏನನ್ನು ಬರೆಯದಿದ್ದರೆ ಅದೇ ಕನ್ನಡ ಸಾರಸ್ವತ ಲೋಕಕ್ಕೆ ನೀನು ಮಾಡಬಹುದಾದ ಅತಿದೊಡ್ಡ ಸೇವೆ' ಎಂದು ಪ್ರಾರಂಭದ ದಿನಗಳಲ್ಲಿ ಅವರನ್ನು ಹಾಸ್ಯಮಾಡಿದ್ದರಂತೆ ಪ್ರಕಾರಕರೂ ಕೂಡ ಅಂದಿನ ದಿನಗಳಲ್ಲಿ ಸ್ತ್ರೀಯರ ಕತೆ ಕಾದಂಬರಿಗಳನ್ನು ಪ್ರಕಟಿಸಲು ಮುಂದೆ ಬರುತ್ತಿರಲಿಲ್ಲ. ಇಂತಹ ಕಠಿಣ ಹಾಗೂ ಪ್ರತಿಕೂಲವಾತವರಣದಲ್ಲಿ ತ್ರಿವೇಣಿಯವರು ಪ್ರಬಲ ಸ್ತ್ರೀಪರ ನಿಲುವಿನಿಂದ ತಮ್ಮ ಮೊದಲನೆಯ ಕಾದಂಬರಿಯನ್ನು ಬರೆದರು.

ತ್ರಿವೇಣಿಯವರು ಚಿತ್ರಿಸಿರುವ ಸ್ತ್ರೀ-ಪುರುಷ ಸಂಬಂಧಗಳನ್ನು ವಿಶ್ಲೇಷಿಸುವಾಗ ಅವರ ಕಾದಂಬರಿಗಳೆಲ್ಲವೂ ೫೦ ದಶಕದಲ್ಲಿ ಬರೆಯಲ್ಪಟ್ಟವು ಎಂಬ ಅಂಶವನ್ನು ನೆನಪಿನಲ್ಲಿಡ ಬೇಕು. ಅಂದಿನ ದಿನಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಔದ್ಯೋಗೀಕರಣ ಆಗ ತಾನೆ ಪ್ರಾರಂಭಾಗಿತ್ತು ಸ್ತ್ರೀ ಶಿಕ್ಷಣ ಇಂದಿನಷ್ಟು ವ್ಯಾಪಕವಗಿರಲಿಲ್ಲ, ಪರಿಣಾಮತಃ ಸ್ವತಂತ್ರ ಉದ್ಯೋಗವೆನ್ನುವುದು ಸ್ತ್ರೀಯೊಬ್ಬಳಿಗೆ ಆಯ್ಕೆಯ ವಿಷಯವೇ ಆಗರಲಿಲ್ಲ.

ತಮ್ಮ ಅಲ್ಪ ಜೀವಿತಾವಧಿಯಲ್ಲೆ ತಮ್ಮ ಕೃತಿಗಳ ಮೂಲಕ ಸ್ತ್ರೀ ಸಾಹಿತ್ಯಕ್ಕೆ ಮತ್ತು ಸ್ತ್ರೀಪರ ನಿಲುವಿಗೆ ಓದುಗರ ವಿಮರ್ಶಕರ ಮಾನ್ಯತೆಯನ್ನು ಗಳಿಸಿಕೊಟ್ಟಿದ್ದರು. ಇವರ ನಂತರ ಬಂದ ಅನೇಕಾನೇಕ ಲೇಕಕಿಯರಿಗೆ ಅವರು ರಾಜಮಾರ್ಗವನ್ನು ಕಲ್ಪಿಸಿಕೊಟ್ಟರು, ಇಂದು ಜನಪ್ರಿಯತೆಯಲ್ಲಿ ಲೇಖಕಿಯರ ಕಾದಂಬರಿಗಳು ಮಂಚೂಣಿಯಲ್ಲಿದ್ದರೆ ಅದಕ್ಕೆ ಕಾರಣ ತ್ರಿವೇಣಿಯವರು ನಿರ್ಮಿಸಿದ ಕಾದಂಬರಿ ಪರಂಪರೆಯೆ ಕಾರಣ.

ᎦᎧ———————————————————Ꭷ

## ಗ್ರಂಥ ಋಣ

೧. ತ್ರಿವೇಣಿ ಕರತಿಗಳ ಒಳನೋಟ – ಸುಧಾರ್ಥಿ ಪ್ರತಿಭಾ ಕಲಾ ಪರಿಷತ್ತು– ಬೆಂಗಳೂರು

೨. ತ್ರಿವೇಣಿ(ಅನಸೂಯ ಶಂಕರ್) ಸಿ.ಎನ್ ರಾಮಚಂದ್ರನ್. ಭಾರತೀಯ ಸಾಹಿತ್ಯ ನಿರ್ಮಾಪಕರು.

೩.'ತ್ರಿವೇಣಿ' ಭಾಗ್ಯ ಜಯ ಸೂರ್ಯ– ಅನನ್ಯ ಮಹಿಳಾ ಚೇತನ ಮಾಲಿಕೆ. ಬೆಂಗಳೂರು

೪. ವಿವಕ್ಷೆ– ವಿಮರ್ಶಾ ಲೇಖನಗಳು, ಡಾ. ಎಸ್.ವಿದ್ಯಾಶಂಕರ ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು.

೫.'ಅಂತರ್ ಶಿಸ್ತೀಯ ಸಂವೇದನೆ'– ಬರಗೂರು ರಾಮಚಂದ್ರಪ್ಪ ಕರ್ನಾಟಕ ಸಾಹಿತ್ಯ ಅಕಾಡೆಮಿ

೬. ಸಾಹಿತ್ಯ, ವಾಣಿಜ್ಯ ಮತ್ತು ಮಹಿಳಾ ಪ್ರಜ್ಞೆ– ಡಾ ಧರಣಿದೇವಿ ಮಾಲಗಿತ್ತ – ರಾಜ್ ಪ್ರಕಾಶನ ಬೆಂಗಳೂರು.

೭. 'ಮನಸ್ಸು' ಎಂದರೇನು? – ಬರ್ಟ್ರಡ್ ರಸೆಲ್‌ರವರ ಕನ್ನಡ ಅನುವಾದ, ಡಾ.ಪಿ.ವಿ ನಾರಾಯಣ, ವಸಂತ ಪ್ರಕಾಶನ ಬೆಂಗಳೂರು.

೮. ಸಾಹಿತ್ಯ ಮತ್ತು ಮಹಿಳಾ ಸಂವೇದನೆ' ಡಾ ಧರಣಿದೇವಿ ಮಾಲಗಿತ್ತ ರಾಜ್ ಪ್ರಕಾಶನ.

೯. 'ಸಾಹಿತ್ಯ ಮತ್ತು ಮನೋವಿಜ್ಞಾನ' – ಟಿ.ಪಿ ಅಶೋಕ 'ಅಂತರ್ ಶಿಸ್ತೀಯ ಸಂವೇದನೆ'– ಬರಗೂರು ರಾಮಚಂದ್ರಪ್ಪ ಕರ್ನಾಟಕ ಸಾಹಿತ್ಯ ಅಕಾಡೆಮಿ

೧೦. ವಿಮಲಾ, ಎನ್ ವಿ ತ್ರಿವೇಣಿ: ವ್ಯಕ್ತಿ ಮತ್ತು ಸಾಹಿತ್ಯ

೧೧. ಪಾರ್ವತಿ ಎಚ್.ಎಸ್. 'ತ್ರಿವೇಣಿ' ಓದಿನ ಒಳಗೆ

೧೨. ಕನ್ನಡ ಸಾಹಿತ್ಯ ಕೋಶ – ರಾಜಪ್ಪ ದಳವಾಯಿ

೧೩. ಯುಗ ಧರ್ಮ ಸಾಹಿತ್ಯ – ಕೀರ್ತಿನಾಥ ಕುರ್ತಿಕೋಟಿ